KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಆಗಸ್ಟ್ ೧೬, ೨೦೦೭ (ಶ್ರಾವಣ, ೨೫ ಶಕ ವರ್ಷ ೧೯೨೯) | ಸಂಚಿಕೆ ೩೩ |
|---|---|---|

## ಭಾಗ–೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಔಷಧ ನಿಯಂತ್ರಣ ಇಲಾಖೆ**

**ಅಧೀಕ್ಷಕರ ಕಛೇರಿ, ಔಷಧ ಪರೀಕ್ಷಾ ಪ್ರಯೋಗಾಲಯ, ಅರಮನೆ ರಸ್ತೆ, ಬೆಂಗಳೂರು–1**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಔನಿಇ/ ಔಪಪ್ರ/ ಟಿಐಎ/ 2/ 2007–08, ದಿನಾಂಕ:2ನೇ ಆಗಸ್ಟ್, 2007**

ಔಷಧ ನಿಯಂತ್ರಣ ಇಲಾಖೆ ಮತ್ತು ಔಷಧ ಪರೀಕ್ಷಾ ಪ್ರಯೋಗಾಲಯಕ್ಕೆ ಬೇಕಾಗಿರುವ ಸ್ವಚ್ಛತಾ ಮತ್ತು ತೋಟಗಾರಿಕೆ ನಿರ್ವಹಣೆ ಸೇವೆಗಳನ್ನು ಒಂದು ವರ್ಷದ ಅವಧಿಗೆ ಒದಗಿಸಲು ಅರ್ಹ ಮಾನವ ಸೇವಾ ಸಂಸ್ಥೆ ಅಥವಾ ಏಜೆನ್ಸಿಗಳಿಂದ ಮೊಹರಾದ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಟೆಂಡರ್ ನಮೂನೆಯ ಶುಲ್ಕ ರೂ.68/– ಟೆಂಡರ್ ಫಾರಂಗಳನ್ನು ದಿನಾಂಕ:16.08.2007 ರಿಂದ ಕಛೇರಿ ಕೆಲಸದ ದಿನಗಳಂದು ಸಂಜೆ 4.00 ಗಂಟೆಯವರೆಗೆ ನಗದು ಪಾವತಿಸಿ ಪಡೆಯಬಹುದು. ಟೆಂಡರ್ ಫಾರಂಗಳನ್ನು ಪಡೆಯಲು ಕೊನೆಯ ದಿನಾಂಕ:17.09.2007. ಮೊಹರಾದ ಟೆಂಡರ್‌ಗಳನ್ನು ದಿನಾಂಕ:22.09.2007ರಂದು ಸಂಜೆ 4.00 ಗಂಟೆಯೊಳಗೆ ಸದಸ್ಯ ಕಾರ್ಯದರ್ಶಿ, ಟೆಂಡರ್ ಆಹ್ವಾನ ಪ್ರಾಧಿಕಾರ ಮತ್ತು ಟೆಂಡರ್ ಅಂಗೀಕರಿಸುವ ಪ್ರಾಧಿಕಾರ ಸಮಿತಿ ಮತ್ತು ಅಧೀಕ್ಷಕರು (ಪ್ರಯೋಗಾಲಯ) ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು. ಟೆಂಡರ್‌ನ್ನು ತೆರೆಯುವ ದಿನಾಂಕ: 24.09.2007ರಂದು ಬೆಳಿಗ್ಗೆ 11.30 ಗಂಟೆಗೆ ಟೆಂಡರ್ ತೆರೆಯುವ ದಿನಾಂಕದಂದು ರಜೆಯೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನದಂದು ಟೆಂಡರ್ ತೆರೆಯಲಾಗುವುದು. ಇತರೆ ವಿವರಗಳನ್ನು ಸದರಿ ಕಛೇರಿಯಿಂದ ಪಡೆಯಬಹುದು.

ಸದಸ್ಯ ಕಾರ್ಯದರ್ಶಿ,
ಟೆಂಡರ್ ಆಹ್ವಾನ ಪ್ರಾಧಿಕಾರ ಮತ್ತು
ಟೆಂಡರ್ ಅಂಗೀಕರಿಸುವ ಪ್ರಾಧಿಕಾರ ಸಮಿತಿ ಮತ್ತು
ಅಧೀಕ್ಷಕರು (ಪ್ರಯೋಗಾಲಯ), ಔಷಧ ಪರೀಕ್ಷಾ ಪ್ರಯೋಗಾಲಯ,
ಬೆಂಗಳೂರು–560 001.

ಪಿ.ಆರ್.496

**ಔಷಧ ನಿಯಂತ್ರಣ ಇಲಾಖೆ**

**ಅಧೀಕ್ಷಕರ ಕಛೇರಿ, ಔಷಧ ಪರೀಕ್ಷಾ ಪ್ರಯೋಗಾಲಯ, ಅರಮನೆ ರಸ್ತೆ, ಬೆಂಗಳೂರು–1**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಔನಿಇ/ ಔಪಪ್ರ/ ಟಿಐಎ/ 1/ 2007–08, ದಿನಾಂಕ:2ನೇ ಆಗಸ್ಟ್, 2007**

ಔಷಧ ನಿಯಂತ್ರಣ ಇಲಾಖೆ ಮತ್ತು ಔಷಧ ಪರೀಕ್ಷಾ ಪ್ರಯೋಗಾಲಯಕ್ಕೆ ಬೇಕಾಗಿರುವ ಭದ್ರತಾ ಸಿಬ್ಬಂದಿಯ ಸೇವೆಗಳನ್ನು ಒಂದು ವರ್ಷದ ಅವಧಿಗೆ ಒದಗಿಸಲು ಅರ್ಹ ಮಾನವ ಸೇವಾ ಸಂಸ್ಥೆ ಅಥವಾ ಏಜೆನ್ಸಿಗಳಿಂದ ಮೊಹರಾದ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಟೆಂಡರ್ ನಮೂನೆಯ ಶುಲ್ಕ ರೂ.68/– ಟೆಂಡರ್ ಫಾರಂಗಳನ್ನು ದಿನಾಂಕ:16.08.2007

ರಿಂದ ಕಛೇರಿ ಕೆಲಸದ ದಿನಗಳಂದು ಸಂಜೆ 4.00 ಗಂಟೆಯವರೆಗೆ ನಗದು ಪಾವತಿಸಿ ಪಡೆಯಬಹುದು. ಟೆಂಡರ್ ಫಾರಂಗಳನ್ನು ಪಡೆಯಲು ಕೊನೆಯ ದಿನಾಂಕ:17.09.2007. ಮೊಹರಾದ ಟೆಂಡರ್‌ಗಳನ್ನು ದಿನಾಂಕ:22.09.2007ರಂದು ಸಂಜೆ 4.00 ಗಂಟೆಯೊಳಗೆ ಸದಸ್ಯ ಕಾರ್ಯದರ್ಶಿ, ಟೆಂಡರ್ ಆಹ್ವಾನ ಪ್ರಾಧಿಕಾರ ಮತ್ತು ಟೆಂಡರ್ ಅಂಗೀಕರಿಸುವ ಪ್ರಾಧಿಕಾರ ಸಮಿತಿ ಮತ್ತು ಅಧೀಕ್ಷಕರು (ಪ್ರಯೋಗಾಲಯ) ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು. ಟೆಂಡರ್‌ನ್ನು ತೆರೆಯುವ ದಿನಾಂಕ: 24.09.2007ರಂದು ಬೆಳಿಗ್ಗೆ 11.00 ಗಂಟೆಗೆ ಟೆಂಡರ್ ತೆರೆಯುವ ದಿನಾಂಕದಂದು ರಜೆಯೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನದಂದು ಟೆಂಡರ್ ತೆರೆಯಲಾಗುವುದು. ಇತರೆ ವಿವರಗಳನ್ನು ಸದರಿ ಕಛೇರಿಯಿಂದ ಪಡೆಯಬಹುದು.

ಸದಸ್ಯ ಕಾರ್ಯದರ್ಶಿ,
ಟೆಂಡರ್ ಆಹ್ವಾನ ಪ್ರಾಧಿಕಾರ ಮತ್ತು
ಟೆಂಡರ್ ಅಂಗೀಕರಿಸುವ ಪ್ರಾಧಿಕಾರ ಸಮಿತಿ ಮತ್ತು
ಅಧೀಕ್ಷಕರು (ಪ್ರಯೋಗಾಲಯ), ಔಷಧ ಪರೀಕ್ಷಾ ಪ್ರಯೋಗಾಲಯ,
ಬೆಂಗಳೂರು–560 001.

ಪಿ.ಆರ್.497

## ಕರ್ನಾಟಕ ಲೋಕಸೇವಾ ಆಯೋಗ
## ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು
## ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: ಇ(2)20/ 2007–08/ ಪಿಎಸ್‌ಸಿ, ಬೆಂಗಳೂರು, ದಿನಾಂಕ:28ನೇ ಮೇ, 2007**

**ವಿಷಯ:** 2005ರ ಸಹಾಯಕರು/ ಪ್ರಥಮ ದರ್ಜೆ ಸಹಾಯಕರ ನೇಮಕಾತಿಯ ಅಂತಿಮ ಆಯ್ಕೆಪಟ್ಟಿಗೆ ತಿದ್ದುಪಡಿ ಮಾಡುವ ಬಗ್ಗೆ.

**ಉಲ್ಲೇಖ:** 1) ಅಧಿಸೂಚನೆ ಸಂಖ್ಯೆ: ಇ(2)25/ 2005–06/ ಪಿಎಸ್‌ಸಿ, ದಿನಾಂಕ:02.06.2005.
2) ಅಧಿಸೂಚನೆ ಸಂಖ್ಯೆ: ಇ(2)551/ 2006–07/ ಪಿಎಸ್‌ಸಿ, ದಿನಾಂಕ:14/17.07.2006.

ಸಹಾಯಕರು/ ಪ್ರಥಮ ದರ್ಜೆ ಸಹಾಯಕರ ನೇಮಕಾತಿಗೆ ಸಂಬಂಧಿಸಿದಂತೆ ಉಲ್ಲೇಖಿತ ದಿನಾಂಕ:02.06.2005ರ ಅಧಿಸೂಚನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿದ್ದು ದಿನಾಂಕ:14/17.07.2006ರ ಅಧಿಸೂಚನೆಯಲ್ಲಿ 1065 ಹುದ್ದೆಗಳಿಗೆ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗಿತ್ತು. ಅದರಂತೆ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಾರ್ಯಾಲಯ, ಬೆಂಗಳೂರು, ಇಲ್ಲಿಗೆ 100 ಅಭ್ಯರ್ಥಿಗಳನ್ನು ಹಂಚಿಕೆ ಮಾಡಲಾಗಿದ್ದು ಪರಿಶಿಷ್ಟಜಾತಿ/ ಮಾಜಿಸೈನಿಕ ಮೀಸಲಾತಿಯಡಿ ಆಯ್ಕೆಯಾಗಿದ್ದ ಕ್ರ.ಸಂ. 100ರ ಅಭ್ಯರ್ಥಿ ಶ್ರೀರಾಮಾಂಜನೇಯ ಎಲ್. (ನೋ.ಸಂ.51792) ಅವರು ಮಾಜಿ ಸೈನಿಕ ಮೀಸಲಾತಿಗೆ ಅನರ್ಹರೆಂದು ದೃಢಪಟ್ಟಿರುವುದರಿಂದ ಅವರ ಆಯ್ಕೆಯನ್ನು ರದ್ದುಪಡಿಸಿ ಅವರ ಬದಲಿಗೆ ಶ್ರೀ ಆನಂದ್ ಇ. (ನೋ.ಸಂ.34676) ಅವರನ್ನು ಪ.ಜಾ/ ಮಾ.ಸೈ. ಮೀಸಲಾತಿಯಡಿ ಆಯ್ಕೆ ಮಾಡಿ ಅವರ ಹೆಸರನ್ನು ಸೇರ್ಪಡೆಗೊಳಿಸಿ ಈ ಕೆಳಕಂಡಂತೆ ತಿದ್ದುಪಡಿಯನ್ನು ಹೊರಡಿಸಲಾಗಿದೆ.

**ಇಲಾಖೆಯ ಕ್ರ.ಸಂ.** 5. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಾರ್ಯಾಲಯ, ಬೆಂಗಳೂರು–5.

| ಕ್ರ. ಸಂ. | ಅಭ್ಯರ್ಥಿಯ ಹೆಸರು | ನೋಂದಣಿ ಸಂಖ್ಯೆ | ಜನ್ಮ ದಿನಾಂಕ | ಮೀಸಲಾತಿ | ಪಡೆದ ಅಂಕಗಳು |
|---|---|---|---|---|---|
| 100 | ಆನಂದ್ ಇ. | 34676 | 26.08.1968 | ಪ.ಜಾ/ ಮಾ.ಸೈ. | 130.50 |

**ಷರಾ:** ಮೇಲ್ಕಂಡ ಅಭ್ಯರ್ಥಿಯ ಹೆಸರನ್ನು ಕ್ರ.ಸಂ.99ರ ಅಭ್ಯರ್ಥಿಯಾದ ಶ್ರೀ ರಣಜಿತ್‌ಸಿಂಗ್ ರಜಪುತ್ (38223) ರವರ ಹೆಸರಿನ ನಂತರ ಸೇರ್ಪಡೆ ಮಾಡಲಾಗಿದೆ.

**ಹೆಚ್.ವಿ. ಪಾರ್ಶ್ವನಾಥ್**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.498

## ವಾಣಿಜ್ಯ ತೆರಿಗೆ ಇಲಾಖೆ
## ವಾಣಿಜ್ಯ ತೆರಿಗೆ ಆಯುಕ್ತರವರ ಕಛೇರಿ, ವಾಣಿಜ್ಯ ತೆರಿಗೆ ಕಾರ್ಯಾಲಯ, ಗಾಂಧಿನಗರ, ಬೆಂಗಳೂರು–09
## ಅಧಿಸೂಚನೆ

**ಸಂಖ್ಯೆ: ಸಿಬ್ಬಂದಿ.2ಎ. ಸಿಆರ್.07/ 2006–07, ದಿನಾಂಕ:31ನೇ ಜುಲೈ, 2007**

ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಗುಪ್ತವಾರ್ತೆ), ದಕ್ಷಿಣ ವಲಯ, ಬೆಂಗಳೂರು ಇವರ ಕಛೇರಿಯಲ್ಲಿ ವಾಣಿಜ್ಯ ತೆರಿಗೆ ಪರಿವೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಪ್ರಕಾಶ್ ಇವರ ಹೆಸರನ್ನು ಎ. ಪ್ರಕಾಶ್ ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಪಿ.ಡಿ.138

ವಾಣಿಜ್ಯ ತೆರಿಗೆ ಅಪರ ಆಯುಕ್ತರು,
(ಕರ್ನಾಟಕ), ಬೆಂಗಳೂರು.

## ಕರ್ನಾಟಕ ಲೋಕ ಸೇವಾ ಆಯೋಗ

### ಕರ್ನಾಟಕ ಲೋಕ ಸೇವಾ ಆಯೋಗ, "ಉದ್ಯೋಗ ಸೌಧ " ಬೆಂಗಳೂರು-560001

### ತಿದ್ದುಪಡಿ ಸಂಖ್ಯೆ: ಆರ್(1) 4059/07-08/ಪಿಎಸ್‌ಸಿ, ದಿನಾಂಕ:14ನೇ ಆಗಸ್ಟ್, 2007

ಸರ್ಕಾರದ ವಿವಿಧ ಇಲಾಖೆಗಳಲ್ಲಿ ಖಾಲಿ ಇರುವ ಸಮೂಹ 'ಎ', 'ಬಿ' ಮತ್ತು 'ಸಿ' ಗುಂಪಿನ ಹುದ್ದೆಗಳಿಗೆ ದಿನಾಂಕ 05-07-2007ರಂದು ಅಧಿಸೂಚನೆ ಹೊರಡಿಸಿದ್ದು, ದಿನಾಂಕ:12-07-2007ರ ರಾಜ್ಯಪತ್ರದ ಭಾಗ-5ರಲ್ಲಿ ಪ್ರಕಟಿಸಲಾಗಿರುತ್ತದೆ. ಆದರೆ ಕೆಲವು ಹುದ್ದೆಗಳಿಗೆ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಾತಿ ನೀಡಿರಲಿಲ್ಲ. ಈಗ ಸಂಬಂಧಪಟ್ಟ ಇಲಾಖೆಯ ಸ್ಪಷ್ಟೀಕರಣ ಮತ್ತು ಸರ್ಕಾರಿ ಆದೇಶ ಸಂಖ್ಯೆ ಡಿಪಿಎಆರ್ 52 ಎಸ್‌ಆರ್‌ಆರ್ 99 ದಿನಾಂಕ:29-11-2002 ಮತ್ತು 13-09-2005 ರನ್ವಯ ಈ ಕೆಳಕಂಡ ಹುದ್ದೆಗಳಲ್ಲಿ ಅಂಗವಿಕಲ ಅಭ್ಯರ್ಥಿಗಳಿಗೆ ಹುದ್ದೆಗಳನ್ನು ಮೀಸಲಿರಿಸಿದ್ದು ಹುದ್ದೆಗಳ ಪರಿಷ್ಕೃತ ವರ್ಗೀಕರಣ ಈ ಕೆಳಗಿನಂತಿರುತ್ತದೆ.

**(1) ಜಲ ಸಂಪನ್ಮೂಲ ಇಲಾಖೆಯಲ್ಲಿ ಸಹಾಯಕ ಅಭಿಯಂತರರ (ಸಿವಿಲ್) 648 ಹುದ್ದೆಗಳು:**

ಪುಟ ಸಂಖ್ಯೆ 1382ರ ಕ್ರಮ ಸಂಖ್ಯೆ 747-1394ರಲ್ಲಿ ವರ್ಗೀಕರಿಸಿದ ಹುದ್ದೆಗಳಲ್ಲಿ ಬದಲಾವಣೆಯಾಗಿದ್ದು ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಾತಿ ಕಲ್ಪಿಸಿದ ನಂತರ ಪರಿಷ್ಕೃತ ವರ್ಗೀಕರಣವನ್ನು ಈ ಕೆಳಕಂಡಂತೆ ಓದಿಕೊಳ್ಳುವುದು:-

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕ | ಕಮಾಅ | ಅಂಗವಿಕಲ | ಒಟ್ಟು |
|---|---|---|---|---|---|---|---|
| ಪ.ಜಾ. | 26 | 30 | 24 | 10 | 05 | 03 | 98 |
| ಪ.ಪಂ. | 05 | 06 | 04 | 02 | 01 | 01 | 19 |
| ಪ್ರ 1 | 06 | 07 | 07 | 03 | 01 | 01 | 25 |
| ಪ್ರ.2(ಎ) | 26 | 29 | 24 | 10 | 05 | 03 | 97 |
| ಪ್ರ.2(ಬಿ) | 06 | 08 | 07 | 03 | 01 | 01 | 26 |
| ಪ್ರ.3(ಎ) | 06 | 08 | 07 | 03 | 01 | 01 | 26 |
| ಪ್ರ.3(ಬಿ) | 09 | 09 | 08 | 04 | 02 | 01 | 33 |
| ಸಾ.ಅ. | 87 | 97 | 81 | 32 | 17 | 10 | 324 |
| **ಒಟ್ಟು** | **171** | **194** | **162** | **67** | **33** | **21** | **648** |

(ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳಿಗೆ ಶ್ರವಣದೋಷ ಮತ್ತು ಚಲನವಲನ ವೈಕಲ್ಯ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ. ಆದರೆ, ಅಂಧ / ದೃಷ್ಟಿಮಾಂದ್ಯ ಅಭ್ಯರ್ಥಿಗಳು ಈ ಹುದ್ದೆಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ)

**(2) ಜಲ ಸಂಪನ್ಮೂಲ ಇಲಾಖೆಯಲ್ಲಿ ಸಹಾಯಕ ಅಭಿಯಂತರರ (ಮೆಕ್ಯಾನಿಕಲ್) 72 ಹುದ್ದೆಗಳು:**

ಪುಟ ಸಂಖ್ಯೆ 1383ರ ಕ್ರಮ ಸಂಖ್ಯೆ 1395-1466ರಲ್ಲಿ ಸಾಮಾನ್ಯ ವರ್ಗದ ಇತರೆ ಅಭ್ಯರ್ಥಿಗಳಿಗೆ ಮೀಸಲಿಟ್ಟ 11 ಹುದ್ದೆಗಳಿಗೆ ಬದಲಾಗಿ 10 ಹುದ್ದೆಗಳೆಂದು ಓದಿಕೊಳ್ಳತಕ್ಕದ್ದು ಹಾಗೂ 01 ಹುದ್ದೆಯನ್ನು ಶ್ರವಣದೋಷ ಮತ್ತು ಚಲನವಲನವೈಕಲ್ಯ ಹೊಂದಿರುವ ಅಂಗವಿಕಲ ಅಭ್ಯರ್ಥಿಗಳಿಗೆ ಮಾತ್ರ ಮೀಸಲಿರಿಸಲಾಗಿದೆ ಎಂದು ಓದಿಕೊಳ್ಳತಕ್ಕದ್ದು.

**(3) ಜಲ ಸಂಪನ್ಮೂಲ ಇಲಾಖೆಯಲ್ಲಿ ಕಿರಿಯ ಇಂಜಿನಿಯರ್ (ಸಿವಿಲ್) 581 ಹುದ್ದೆಗಳು ಹಾಗೂ ಕಿರಿಯ ಇಂಜಿನಿಯರ್ (ಮೆಕ್ಯಾನಿಕಲ್) - 65 ಹುದ್ದೆಗಳು:-**

ಪುಟ ಸಂಖ್ಯೆ 1389-1390 ರಲ್ಲಿನ ಕ್ರಮ ಸಂಖ್ಯೆ 97-742 ರಲ್ಲಿನ ವರ್ಗೀಕರಣದಲ್ಲಿ ಅನುಕ್ರಮವಾಗಿ 30 ಮತ್ತು 01 ಹುದ್ದೆಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿರಿಸಿದ್ದು, ಈ ಹುದ್ದೆಗಳಿಗೆ ಕುಷ್ಠರೋಗದಿಂದ ಗುಣ ಹೊಂದಿದ / ಶ್ರವಣದೋಷ / ಚಲನವಲನ ವೈಕಲ್ಯ /ಬುದ್ಧಿಮಾಂದ್ಯ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಿದ್ದು, ಅಂಧ / ದೃಷ್ಟಿಮಾಂದ್ಯ / ಮಾನಸಿಕ ಅಸ್ವಸ್ಥ ಅಭ್ಯರ್ಥಿಗಳು ಈ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

**(4) ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯಲ್ಲಿ ಅಗ್ರ ಕಾರ್ಮಿಕರ 17 ಹುದ್ದೆಗಳು**

ಪುಟ ಸಂಖ್ಯೆ 1388ರ ಕ್ರಮ ಸಂಖ್ಯೆ 01-17ರಲ್ಲಿ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳಲ್ಲಿ 01 ಹುದ್ದೆಯನ್ನು ಕುಷ್ಠರೋಗದಿಂದ ಗುಣ ಹೊಂದಿದ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿರಿಸಿದೆ..

**(5) ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಗ್ರಂಥಪಾಲಕರ 75 ಹುದ್ದೆಗಳು:-**

ಪುಟ ಸಂಖ್ಯೆ 1389ರ ಕ್ರಮ ಸಂಖ್ಯೆ 22-96 ರಲ್ಲಿ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿಟ್ಟ 04 ಹುದ್ದೆಗಳಿಗೆ ಕುಷ್ಠರೋಗದಿಂದ ಗುಣ ಹೊಂದಿದ / ಶ್ರವಣದೋಷ / ಚಲನವಲನ ವೈಕಲ್ಯ ಹಾಗೂ ಬುದ್ಧಮಾಂದ್ಯ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಲು ಅರ್ಹರು. ಅಂಧ / ದೃಷ್ಟಿಮಾಂದ್ಯ / ಮಾನಸಿಕ ಅಸ್ವಸ್ಥ ಅಭ್ಯರ್ಥಿಗಳು ಈ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

ಮೇಲೆ ನಮೂದಿಸಿರುವ ಇಲಾಖೆಗಳಲ್ಲಿ ಅಂಗವಿಕಲ ಮೀಸಲಾತಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ನಿಗದಿಪಡಿಸಿದ ಕೊನೆಯ ದಿನಾಂಕವನ್ನು 13-08-2007 ರಿಂದ ದಿನಾಂಕ 31-08-2007ರವರೆಗೆ ನಿಗದಿಪಡಿಸಿ ವಿಸ್ತರಿಸಲಾಗಿದೆ. ಈ ವಿಸ್ತರಣೆಯ ಕಾಲಾವಧಿಯಲ್ಲಿ ಮೇಲ್ಕಂಡ ವೈಪಲ್ಯವಿರುವ ಅಂಗವಿಕಲ ಅಭ್ಯರ್ಥಿಗಳನ್ನು ಹೊರತುಪಡಿಸಿ ಬೇರೆ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ.

**ಸೂಚನೆ:** ಅರ್ಜಿ ಪಡೆಯುವ ಮತ್ತು ಸಲ್ಲಿಸುವ ವಿಧಾನದ ಬಗ್ಗೆ ಹಾಗೂ ಇನ್ನಿತರೇ ಮಾಹಿತಿಗಳಿಗಾಗಿ ಆಯೋಗದ ದಿನಾಂಕ:05.07.2007ರ ಅಧಿಸೂಚನೆಯನ್ನು ನೋಡಬಹುದು.

**ಹೆಚ್.ಬಿ. ಚನ್ನರಾಜು**
ಕಾರ್ಯದರ್ಶಿ, (ಪ್ರಭಾರ)
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.507

**ಕರ್ನಾಟಕ ಲೋಕ ಸೇವಾ ಆಯೋಗ**

**ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-560 001**

**ಅಧಿಸೂಚನೆ**

**ಸಂಖ್ಯೆ: ಇ(1) 585/2007-08/ಪಿಎಸ್‌ಸಿ, ದಿನಾಂಕ:8ನೇ ಆಗಸ್ಟ್, 2007**

**ವಿಷಯ:** ಲೋಕೋಪಯೋಗಿ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ಕಾರ್ಯಪಾಲಕ ಅಭಿಯಂತರರ (ವಿಭಾಗ-1) ಹುದ್ದೆಗಳಿಗೆ ನೇಮಕಾತಿ ಮಾಡುವ ಕುರಿತು.

**ಉಲ್ಲೇಖ:** 1) ಸರ್ಕಾರದ ಅ.ಸ.ಪ ಸಂಖ್ಯೆ ಲೋಇ 285 ಸೇಸಎ 2005 ದಿನಾಂಕ 09-03-2007.
2) ಅಧಿಸೂಚನೆ ಸಂಖ್ಯೆ ಇ(1) 17/2007-08/ಪಿಎಸ್‌ಸಿ ದಿನಾಂಕ 17-04-2007.
3) ಸರ್ಕಾರದ ಅ.ಸ.ಪ ಸಂಖ್ಯೆ ಲೋಇ 285 ಸೇಸಎ 2005 ದಿನಾಂಕ 18-05-2007.

1. ಉಲ್ಲೇಖ (2)ರಲ್ಲಿನ ಆಯೋಗದ ಅಧಿಸೂಚನೆಯಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿನ ಸಹಾಯಕ ಕಾರ್ಯಪಾಲಕ ಅಭಿಯಂತರರ (ವಿಭಾಗ-1) 52 ಹುದ್ದೆಗಳಿಗೆ ಅಧಿಸೂಚನೆ ಹೊರಡಿಸಲಾಗಿದೆ. ಸದರಿ ಅಧಿಸೂಚನೆಯನ್ನು ಮುಂದುವರೆಸುತ್ತಾ, ಪ್ರಸ್ತುತ ಸರ್ಕಾರದ ಪತ್ರ ದಿನಾಂಕ:18-05-2007ರಲ್ಲಿ ಕೋರಿರುವ 52 ಹುದ್ದೆಗಳನ್ನು ಸೇರಿಸಿ ಮರು ವರ್ಗೀಕರಿಸಿ ಕರ್ನಾಟಕ ಲೋಕೋಪಯೋಗಿ ಅಭಿಯಂತರರ ಇಲಾಖಾ ಸೇವೆಗಳು (ಸಹಾಯಕ ಕಾರ್ಯಪಾಲಕ ಅಭಿಯಂತರರು ವಿಭಾಗ-1, ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು 2007 ರಡಿಯಲ್ಲಿ ಸಹಾಯಕ ಕಾರ್ಯಪಾಲಕ ಅಭಿಯಂತರರ (ವಿಭಾಗ-1) ಒಟ್ಟು 104 ಹುದ್ದೆಗಳನ್ನು ಭರ್ತಿ ಮಾಡಬೇಕಿದ್ದು, ಅದರ'ಲ್ಲಿ 20 ಹುದ್ದೆಗಳನ್ನು ಲೋಕೋಪಯೋಗಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವವರಿಂದ ಮತ್ತು 84 ಹುದ್ದೆಗಳನ್ನು ಹೊರಗಿನ ಅಭ್ಯರ್ಥಿಗಳಿಂದ ಭರ್ತಿ ಮಾಡಲು ಆಯೋಗವು ನಡೆಸುವ ಪರೀಕ್ಷೆಗೆ ಅರ್ಹ ಅಭ್ಯರ್ಥಿಗಳಿಂದ ಆಯೋಗವು ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿದೆ.

**ವಿಶೇಷ ಸೂಚನೆ: ಉಲ್ಲೇಖ (2)ರ ಅಧಿಸೂಚನೆಗನುಗುಣವಾಗಿ ಈಗಾಗಲೇ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳು ಪುನ: ಅರ್ಜಿ ಸಲ್ಲಿಸುವ ಅಗತ್ಯವಿರುವುದಿಲ್ಲ ಹಾಗೂ ಹೊಸದಾಗಿ ಮೀಸಲಾತಿ ಕೋರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗಾಗಿ ಮನವಿಯೊಂದಿಗೆ ತಮ್ಮ ಮೀಸಲಾತಿ ಪ್ರಮಾಣ ಪತ್ರದ ಪ್ರ'ತಿಯನ್ನು ಮಾತ್ರ ಆಯೋಗಕ್ಕೆ ಸಲ್ಲಿಸಬೇಕು ಮತ್ತು ಈಗಾಗಲೇ ಸಲ್ಲಿಸಿರುವ ಅರ್ಜಿಯ ಸಂಖ್ಯೆಯನ್ನು ಮನವಿಯಲ್ಲಿ ನಮೂದಿಸತಕ್ಕದ್ದು.**

ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 10.09.2007 ಆಗಿರುತ್ತದೆ.

2. ಸದರಿ ಹುದ್ದೆಗಳಿಗೆ ಅರ್ಜಿಗಳನ್ನು ಆಯೋಗವು ನಿಗದಿಪಡಿಸಿರುವ ನಮೂನೆಯಲ್ಲಿಯೇ ಸಲ್ಲಿಸಬೇಕು. ಇತರೆ ಯಾವುದೇ ನಮೂನೆಗಳಲ್ಲಿಯಾಗಲಿ ಅಥವಾ ಬೆರಳಚ್ಚು/ಫೋಟೋ ಪ್ರತಿ ಮಾಡಿರುವ, ಕೈಬರಹದಿಂದ ಸಲ್ಲಿಸಲ್ಪಡುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3. ಅರ್ಜಿಗಳನ್ನು ರೂ.50/-ಗಳ ಐ.ಪಿ.ಓ/ಡಿ.ಡಿ ಯನ್ನು **"ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು",** ಇವರಿಗೆ ಸಂದಾಯವಾಗುವಂತೆ ಪಾವತಿಸಿ ಆಯೋಗದ ಕೇಂದ್ರ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು ಹಾಗೂ ಮೈಸೂರು, ಬೆಳಗಾವಿ ಮತ್ತು ಗುಲ್ಬರ್ಗಾಗಳಲ್ಲಿನ ಆಯೋಗದ ಪ್ರಾಂತೀಯ ಕಛೇರಿಗಳಲ್ಲಿ ದಿನಾಂಕ: 16-08-2007 ರಿಂದ ಪಡೆಯಬಹುದು.
4. ಅಂಚೆ ಮೂಲಕ ಅರ್ಜಿಗಳನ್ನು ಪಡೆಯಲು ಅಪೇಕ್ಷಿಸುವವರು ರೂ. 35/- ಮೌಲ್ಯದ ಅಂಚೆ ಚೀಟಿ ಅಂಟಿಸಿರುವ ಸ್ವ-ವಿಳಾಸದ 20 X 30 ಸೆಂ.ಮೀ. ಅಳತೆಯುಳ್ಳ ಲಕೋಟೆಯೊಡನೆ ಅರ್ಜಿ ಶುಲ್ಕ ರೂ. 50/-ಗಳ ಐ.ಪಿ.ಓ/ಡಿ.ಡಿ ಪಾವತಿಸಿ ಮನವಿಯೊಡನೆ ದಿನಾಂಕ:03.09.2007 ರೊಳಗೆ ಬೆಂಗಳೂರಿನಲ್ಲಿರುವ ಆಯೋಗದ ಕೇಂದ್ರ ಕಛೇರಿಗೆ ಮಾತ್ರ ಕಳುಹಿಸಿ ಪಡೆಯಬಹುದಾಗಿದೆ.

**ಸೂಚನೆ: ನಿಗದಿತ ದಿನಾಂಕ: 03-09-2007ರ ನಂತರ ಅರ್ಜಿ ಕೋರಿ ಬರುವ ಯಾವುದೇ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.**

**ಪ್ರಾಂತೀಯ ಕಛೇರಿಗಳ ವಿಳಾಸ:**

**1. ಸಹಾಯಕ ಕಾರ್ಯದರ್ಶಿ**
**ಕರ್ನಾಟಕ ಲೋಕಸೇವಾ ಆಯೋಗ**
ಪ್ರಾಂತೀಯ ಕಛೇರಿ
ಸಂಖ್ಯೆ:899, 3ನೇ ಮೈನ್, 8ನೇ ಅಡ್ಡರಸ್ತೆ,
ಸರಸ್ವತಿಪುರಂ,
ಮೈಸೂರು-570 009

**2. ಸಹಾಯಕ ಕಾರ್ಯದರ್ಶಿ**
**ಕರ್ನಾಟಕ ಲೋಕಸೇವಾ ಆಯೋಗ**
ಪ್ರಾಂತೀಯ ಕಛೇರಿ
ಸಿಟಿಎಸ್ ನಂ.6543, ಸೆಕ್ಟರ್ 10
ಮಾಳ ಮಾರುತಿ ಬಡಾವಣೆ,
ಆಂಜನೇಯನಗರ, ಬೆಳಗಾವಿ-590 016

**3. ಸಹಾಯಕ ಕಾರ್ಯದರ್ಶಿ,**
**ಕರ್ನಾಟಕ ಲೋಕಸೇವಾ ಆಯೋಗ**
ಪ್ರಾಂತೀಯ ಕಛೇರಿ,
ಸಂಖ್ಯೆ: 28, 3ನೇ ಮಹಡಿ
ವಿಕಾಸ ಭವನ, ಮಿನಿ ವಿಧಾನಸೌಧ
ಗುಲ್ಬರ್ಗಾ-585 102

**ಸೂಚನೆ:** ಭರ್ತಿ ಮಾಡಿದ ಅರ್ಜಿಗಳನ್ನು ಮೇಲೆ ತಿಳಿಸಿರುವ ಕರ್ನಾಟಕ ಲೋಕಸೇವಾ ಆಯೋಗದ ಕೇಂದ್ರ ಕಛೇರಿ, ಬೆಂಗಳೂರು ಅಥವಾ ಆಯೋಗದ ಪ್ರಾಂತೀಯ ಕಛೇರಿಗಳಲ್ಲಿ ಖುದ್ದಾಗಿ ಸಲ್ಲಿಸಬೇಕು. ಅಂಚೆ ಮೂಲಕ ಅರ್ಜಿ ಸಲ್ಲಿಸಬಯಸುವ ಅಭ್ಯರ್ಥಿಗಳು ಆಯೋಗದ ಕೇಂದ್ರ ಕಛೇರಿ, ಉದ್ಯೋಗ ಸೌಧ, ಬೆಂಗಳೂರು–560 001, ಇಲ್ಲಿಗೆ ಮಾತ್ರ ಸಲ್ಲಿಸತಕ್ಕದ್ದು. ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ನಿಗದಿತ ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

5. **ಪರೀಕ್ಷಾ ಕೇಂದ್ರಗಳು:–** ಸ್ಪರ್ಧಾತ್ಮಕ ಪರೀಕ್ಷೆಯನ್ನು ಈ ಕೆಳಕಂಡ ಕೇಂದ್ರಗಳಲ್ಲಿ ನಡೆಸಲಾಗುವುದು.

| ಪರೀಕ್ಷಾ ಕೇಂದ್ರ | ಕೋಡ್ ನಂಬರ್ |
|---|---|
| ಬೆಂಗಳೂರು | 01 |
| ಧಾರವಾಡ | 02 |
| ಗುಲ್ಬರ್ಗಾ | 03 |
| ಮೈಸೂರು | 04 |

ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಪರೀಕ್ಷಾ ಕೇಂದ್ರವನ್ನು ಯಾವುದೇ ಕಾರಣಕ್ಕೂ ಬದಲಾಯಿಸಲಾಗುವುದಿಲ್ಲ. ಪರೀಕ್ಷಾ ಕೇಂದ್ರಗಳು ಆಯೋಗದ ವಿವೇಚಾನುಸಾರವಾಗಿ ಬದಲಾವಣೆಗೆ ಒಳಪಟ್ಟಿರುತ್ತವೆ. ಆಯೋಗವು ಅಭ್ಯರ್ಥಿಗೆ ಬೇರೆ ಕೇಂದ್ರವನ್ನು ಸೂಚಿಸಬಹುದು. ಅಥವಾ ಪರಿಸ್ಥಿತಿಗನುಗುಣವಾಗಿ ಹೊಸ ಕೇಂದ್ರವನ್ನು ತೆರೆಯಬಹುದು. ಈ ಸಂಬಂಧದಲ್ಲಿ ಆಯೋಗದ ತೀರ್ಮಾನವೇ ಅಂತಿಮವಾಗಿರುತ್ತದೆ ಮತ್ತು ಈ ವಿಷಯದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

6. **ಹುದ್ದೆಗಳ ವರ್ಗೀಕರಣ:**

| ಹೊರಗಿನ ಅಭ್ಯರ್ಥಿಗಳಿಂದ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಭರ್ತಿಮಾಡಬೇಕಾಗಿರುವ ಹುದ್ದೆಗಳು | | | | | | |
|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕ | ಕ.ಮಾ.ಅ | ಒಟ್ಟು |
| ಪ.ಜಾ | 4 | 4 | 4 | 1 | – | 13 |
| ಪ.ಪಂ | 1 | 1 | 1 | – | – | 3 |
| ಪ್ರವರ್ಗ–1 | 2 | 1 | 1 | – | – | 4 |
| ಪ್ರವರ್ಗ 2ಎ | 4 | 4 | 3 | 1 | – | 12 |
| ಪ್ರವರ್ಗ 2ಬಿ | 1 | 1 | 1 | – | – | 3 |
| ಪ್ರವರ್ಗ 3ಎ | 1 | 1 | 1 | – | – | 3 |
| ಪ್ರವರ್ಗ 3ಬಿ | 2 | 1 | 1 | – | – | 4 |
| ಸಾ.ಅ | 13 | 13 | 10 | 4 | 2 | 42 |
| **ಒಟ್ಟು** | **28** | **26** | **22** | **6** | **2** | **84** |

| ಲೋಕೋಪಯೋಗಿ ಇಲಾಖೆಯ ಸೇವೆಯಲ್ಲಿರುವವರಿಂದ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಭರ್ತಿಮಾಡಬೇಕಾಗಿರುವ ಹುದ್ದೆಗಳು | | | | | | |
|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕ | ಕ.ಮಾ.ಅ | ಒಟ್ಟು |
| ಪ.ಜಾ | 1 | 1 | 1 | – | – | 3 |
| ಪ.ಪಂ | 1 | – | – | – | – | 1 |
| ಪ್ರವರ್ಗ–1 | 1 | – | – | – | – | 1 |
| ಪ್ರವರ್ಗ 2ಎ | 1 | 1 | – | – | – | 2 |
| ಪ್ರವರ್ಗ 2ಬಿ | 1 | – | – | – | – | 1 |
| ಪ್ರವರ್ಗ 3ಎ | 1 | – | – | – | – | 1 |
| ಪ್ರವರ್ಗ 3ಬಿ | 1 | – | – | – | – | 1 |
| ಸಾ.ಅ | 3 | 3 | 3 | 1 | – | 10 |
| **ಒಟ್ಟು** | **10** | **5** | **4** | **1** | **–** | **20** |

**ಸೂಚನೆ:** ಮೇಲಿನ ವರ್ಗೀಕರಣ ಮತ್ತು ರಿಕ್ತ ಸ್ಥಾನಗಳು ಬದಲಾವಣೆಗೆ ಒಳಪಟ್ಟಿರುತ್ತವೆ.

7. **ವೇತನ ಶ್ರೇಣಿ: 14050–25050**

ಹುದ್ದೆಗಳ ಕಾಲಾವಧಿ – ಹುದ್ದೆಯು ಖಾಯಂ ಅವಧಿಯದ್ದಾಗಿದ್ದು, ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರನ್ವಯ ಎರಡು ವರ್ಷಗಳ ಪ್ರೊಬೇಷನರಿ ಅವಧಿಯನ್ನು ಪೂರ್ಣಗೊಳಿಸಬೇಕಾಗಿರುತ್ತದೆ ಹಾಗೂ ಉಳಿದಂತೆ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಂತೆ ಇರುತ್ತದೆ.

8. **ಅರ್ಹತಾ ಷರತ್ತುಗಳು.**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

9. **ಪರೀಕ್ಷಾ ವಿಧಾನ:**

ಕರ್ನಾಟಕ ಲೋಕೋಪಯೋಗಿ ಅಭಿಯಂತರರ ಇಲಾಖಾ ಸೇವೆಗಳು (ಸಹಾಯಕ ಕಾರ್ಯಪಾಲಕ ಅಭಿಯಂತರರು (ವಿಭಾಗ–1) ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು 2007ರಡಿಯಲ್ಲಿ ತಿಳಿಸಿರುವಂತೆ ಇರುತ್ತದೆ. ಹೆಚ್ಚಿನ ವಿವರಗಳಿಗೆ ನಿಯಮಾವಳಿಗಳನ್ನು ಪರಿಶೀಲಿಸಬಹುದು.

**ನೇಮಕಾತಿ ವಿಧಾನವು ಲಿಖಿತ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆಯನ್ನು ಒಳಗೊಂಡಿರುತ್ತದೆ.**

ಲಿಖಿತ ಪರೀಕ್ಷೆಯು ಕನ್ನಡ, ಇಂಗ್ಲೀಷ್, ಸಾಮಾನ್ಯ ಜ್ಞಾನ ಮತ್ತು ಐಚ್ಛಿಕ ವಿಷಯಗಳನ್ನು ಒಳಗೊಂಡಿದ್ದು, ವಿವರಣಾತ್ಮಕ (Descriptive) ಮಾದರಿಯದ್ದಾಗಿರುತ್ತದೆ. ಕನ್ನಡ ಭಾಷಾ ಪತ್ರಿಕೆಯನ್ನು ಹೊರತುಪಡಿಸಿ ಉಳಿದ ಎಲ್ಲಾ ಪತ್ರಿಕೆಗಳನ್ನು ಅಭ್ಯರ್ಥಿಗಳು ಪೂರ್ಣವಾಗಿ ಆಂಗ್ಲ ಭಾಷೆಯಲ್ಲಿಯೇ ಉತ್ತರಿಸಬೇಕಾಗಿರುತ್ತದೆ.

**ವ್ಯಕ್ತಿತ್ವ ಪರೀಕ್ಷೆಯ ಗರಿಷ್ಠ ಅಂಕಗಳು ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡ 5ಕ್ಕಿಂತ ಹೆಚ್ಚಾಗುವಂತಿಲ್ಲ.**

ಸ್ಪರ್ಧಾತ್ಮಕ ಪರೀಕ್ಷೆಯ ವಿವರ:

| | | | |
|---|---|---|---|
| ಪತ್ರಿಕೆ –1 | ಕನ್ನಡ | 100 ಅಂಕಗಳು | $1^1/_2$ ಘಂಟೆಗಳು |
| ಪತ್ರಿಕೆ –2 | ಇಂಗ್ಲೀಷ್ | 100 ಅಂಕಗಳು | $1^1/_2$ ಘಂಟೆಗಳು |
| ಪತ್ರಿಕೆ –3 | ಸಾಮಾನ್ಯ ಜ್ಞಾನ | 100 ಅಂಕಗಳು | $1^1/_2$ ಘಂಟೆಗಳು |
| ಪತ್ರಿಕೆ –4 | ಐಚ್ಛಿಕ ವಿಷಯ } ಭಾಗ –ಎ | 100 ಅಂಕಗಳು | 3 ಘಂಟೆಗಳು |
| ಪತ್ರಿಕೆ –5 | ಐಚ್ಛಿಕ ವಿಷಯ } ಭಾಗ –ಎ | 100 ಅಂಕಗಳು | 3 ಘಂಟೆಗಳು |
| ಪತ್ರಿಕೆ –6 | ಐಚ್ಛಿಕ ವಿಷಯ } ಭಾಗ –ಬಿ | 100 ಅಂಕಗಳು | 3 ಘಂಟೆಗಳು |
| ಪತ್ರಿಕೆ –7 | ಐಚ್ಛಿಕ ವಿಷಯ } ಭಾಗ –ಬಿ | 100 ಅಂಕಗಳು | 3 ಘಂಟೆಗಳು |

ಕಡ್ಡಾಯ ಕನ್ನಡ ಮತ್ತು ಇಂಗ್ಲೀಷ್ ಪತ್ರಿಕೆಗಳು ಎಸ್.ಎಸ್.ಎಲ್.ಸಿ (ಮೊದಲ ಭಾಷೆ ಕನ್ನಡ ಮತ್ತು ಮೊದಲ ಭಾಷೆ ಇಂಗ್ಲೀಷ್) ಮಟ್ಟದ್ದಾಗಿರುತ್ತದೆ.

ಕಡ್ಡಾಯ ಕನ್ನಡ ಮತ್ತು ಇಂಗ್ಲೀಷ್ ಪತ್ರಿಕೆಗಳಲ್ಲಿ ಪಡೆದ ಅಂಕಗಳು ಅರ್ಹತಾದಾಯಕ ಸ್ವರೂಪದ್ದಾಗಿರುತ್ತವೆ. ಅರ್ಹತೆ ಪಡೆಯಲು ಈ ಪ್ರತಿಯೊಂದು ಪತ್ರಿಕೆಯಲ್ಲಿ ಕನಿಷ್ಠ ಶೇಕಡ 30 ಮತ್ತು ಸರಾಸರಿ ಶೇಕಡ 35 ಅಂಕಗಳನ್ನು ನಿಗದಿಪಡಿಸಲಾಗಿದೆ. ಈ ಎರಡೂ ಪತ್ರಿಕೆಗಳಲ್ಲಿ ಗಳಿಸಿದ ಅಂಕಗಳನ್ನು ಅಭ್ಯರ್ಥಿಗಳ ಆಯ್ಕೆಯ ಅರ್ಹತೆಯನ್ನು ನಿಗದಿಪಡಿಸುವಲ್ಲಿ ಪರಿಗಣಿಸಲಾಗುವುದಿಲ್ಲ. ಈ ಎರಡು ಪತ್ರಿಕೆಗಳಲ್ಲಿ ನಿಗದಿತ ಅಂಕಗಳನ್ನು ಗಳಿಸದ ಅಭ್ಯರ್ಥಿಗಳು ಐಚ್ಛಿಕ ವಿಷಯಗಳಲ್ಲಿ ಎಷ್ಟೇ ಹೆಚ್ಚು ಅಂಕಗಳನ್ನು ಗಳಿಸಿದ್ದರೂ ವ್ಯಕ್ತಿತ್ವ ಪರೀಕ್ಷೆಗೆ ಅರ್ಹರಾಗುವುದಿಲ್ಲ ಹಾಗೂ ಇಂತಹ ಅಭ್ಯರ್ಥಿಗಳ ಇತರೆ ವಿಷಯಗಳಲ್ಲಿ ಪಡೆದ ಅಂಕಗಳನ್ನು ಪ್ರಕಟಿಸುವುದಿಲ್ಲ.

ಅಭ್ಯರ್ಥಿಗಳು ಆಯ್ಕೆಮಾಡಿಕೊಂಡಿರುವ ಎಲ್ಲಾ ಪತ್ರಿಕೆಗಳಿಗೆ ಕಡ್ಡಾಯವಾಗಿ ಹಾಜರಾಗಬೇಕು. ಯಾವುದೇ ಒಂದು ಪತ್ರಿಕೆಗೆ ಗೈರುಹಾಜರಾದರೂ ಸಹ ಉಳಿದ ಪತ್ರಿಕೆಗಳ'ಲ್ಲಿ ಪಡೆದ ಅಂಕಗಳನ್ನು ಪ್ರಕಟಿಸುವುದಿಲ್ಲ ಹಾಗೂ ಉಳಿದ ಪತ್ರಿಕೆಗಳಲ್ಲಿ ಎಷ್ಟೇ ಅಂಕಗಳನ್ನು ಗಳಿಸಿದ್ದರೂ ಸಹ ವ್ಯಕ್ತಿತ್ವ ಪರೀಕ್ಷೆಗೆ ಅರ್ಹರಾಗುವುದಿಲ್ಲ.

**ಸಾಮಾನ್ಯ ಜ್ಞಾನ ಪತ್ರಿಕೆ –** ನಿಗದಿತ ವಿದ್ಯಾರ್ಹತೆಯ ಪರೀಕ್ಷೆಯಲ್ಲಿ ತೇರ್ಗಡೆಯಾದ ವ್ಯಕ್ತಿಯಿಂದ ನಿರೀಕ್ಷಿಸಬಹುದಾದ ಸಾಮಾನ್ಯ ಜ್ಞಾನದ ವಿಷಯಗಳಿಗೆ ಸಂಬಂಧಿಸಿದಂತೆ ಪ್ರಚಲಿತ ವಿದ್ಯಮಾನಗಳು, ಸಾಮಾನ್ಯ ವಿಜ್ಞಾನ ಮತ್ತು ದಿನನಿತ್ಯ ಗಮನಿಸಬಹುದಾದ ವಿಷಯಗಳು ಹಾಗೂ ಪ್ರಾಯೋಜಿತ ಜ್ಞಾನವನ್ನು ಒಳಗೊಂಡಿರುತ್ತದೆ. ಈ ಪತ್ರಿಕೆಯು ಭಾರತದ ಇತಿಹಾಸ ಮತ್ತು ಭೂಗೋಳ ಶಾಸ್ತ್ರ ವಿಷಯದ ಪ್ರಶ್ನೆಗಳನ್ನು ಒಳಗೊಂಡಿದ್ದು, ಅಭ್ಯರ್ಥಿಯು ಈ ವಿಷಯಗಳಲ್ಲಿ ವಿಶೇಷ ಅಧ್ಯಯನ ಇಲ್ಲದೆಯೂ ಸಹ ಉತ್ತರಿಸುವಂತಿರುತ್ತದೆ.

**ಐಚ್ಛಿಕ ವಿಷಯಗಳು:** ಈ ವಿಷಯಗಳಲ್ಲಿ ಅಭ್ಯರ್ಥಿಗಳು ಭಾಗ 'ಎ' ನಿಂದ ಎರಡು ಪತ್ರಿಕೆಗಳನ್ನು ಮತ್ತು ಭಾಗ 'ಬಿ' ನಿಂದ ಎರಡು ಪತ್ರಿಕೆಗಳನ್ನು ಆಯ್ಕೆ ಮಾಡಿಕೊಳ್ಳಬೇಕಾಗಿರುತ್ತದೆ. ಅಭ್ಯರ್ಥಿಗಳು ಭಾಗ 'ಎ' ಯಲ್ಲಿನ ರೋಡ್ಸ್ ಅಂಡ್ ಬ್ರಿಡ್ಜಸ್ ಅಥವಾ ಪಬ್ಲಿಕ್ ಹೆಲ್ತ್ ಇಂಜಿನಿಯರಿಂಗ್ ವಿಷಯವನ್ನು ಆಯ್ಕೆ ಮಾಡಿಕೊಂಡಲ್ಲಿ ಭಾಗ 'ಬಿ' ಯಲ್ಲಿನ ಪಬ್ಲಿಕ್ ಹೆಲ್ತ್ ಇಂಜಿನಿಯರಿಂಗ್ ಅಥವಾ ಹೈವೇ ಇಂಜಿನಿಯರಿಂಗ್ ವಿಷಯವನ್ನು ಆರಿಸಿಕೊಳ್ಳಲು ಅವಕಾಶ ಇರುವುದಿಲ್ಲ/ಅನುಮತಿ ಇಲ್ಲ. **ಹಾಗೇನಾದರೂ ತೆಗೆದುಕೊಂಡ ಪಕ್ಷದಲ್ಲಿ ಅಂತಹ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು**. ಅಭ್ಯರ್ಥಿಗಳು ಅರ್ಜಿಯ ಕ್ರಮ ಸಂಖ್ಯೆ 10ರಲ್ಲಿ ಐಚ್ಛಿಕ ವಿಷಯ ಮತ್ತು ಕೋಡ್ ಸಂಖ್ಯೆಗಳನ್ನು ಕಡ್ಡಾಯವಾಗಿ ನಮೂದಿಸಬೇಕು.

ಐಚ್ಛಿಕ ವಿಷಯಗಳ ಪ್ರಶ್ನೆ ಪತ್ರಿಕೆಯ ಪಠ್ಯಕ್ರಮವು ಬಿ.ಇ. ಪದವಿ ಅಥವಾ ಎ.ಎಂ.ಐ.ಇ. ಪರೀಕ್ಷೆಯ ಮಟ್ಟದ್ದಾಗಿರುತ್ತದೆ.

**ಐಚ್ಛಿಕ ವಿಷಯಗಳು**

| PART-A | Code No. | PART-B | Code No. |
|---|---|---|---|
| Irrigation | 01 | Advance Structure | 05 |
| Roads and Bridges | 02 | Pre-stressed Concrete | 06 |
| Public Health Engineering | 03 | Advanced Soil Mechanics | 07 |
| Construction Technology and Management | 04 | Public Health Engineering | 08 |
| | | Highway Engineering | 09 |
| | | Hydraulics and Dams | 10 |
| | | Hydrology | 11 |
| | | Theory of Elasticity | 12 |
| | | Basic Electronics | 13 |

ಪರೀಕ್ಷೆಯ ಪಠ್ಯಕ್ರಮವನ್ನು (Syllabus) ಅರ್ಜಿಯೊಂದಿಗೆ ನೀಡಲಾಗುವ ಮಾಹಿತಿ ಪುಸ್ತಕದ ಅನುಬಂಧ–2ರಲ್ಲಿ ನೀಡಲಾಗಿದೆ.

**ಅಭ್ಯರ್ಥಿಗಳಿಗೆ ಯಾವುದೇ ಸಂದರ್ಭದಲ್ಲಿ ಅರ್ಜಿಯಲ್ಲಿ ಕೋರಿರುವ ಐಚ್ಛಿಕ ವಿಷಯಗಳನ್ನು ಬದಲಾವಣೆ ಮಾಡಿಕೊಳ್ಳಲು ಅವಕಾಶವಿರುವುದಿಲ್ಲ.**

ಆಯೋಗವು ನಿಯಮಾನುಸಾರ ನಡೆಸುವ ಲಿಖಿತ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಜ್ಯೇಷ್ಠತೆ ಮತ್ತು ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಇರುವ ಮೀಸಲಾತಿಯನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ 1:5ರ ಪ್ರಮಾಣದಲ್ಲಿ ಅಭ್ಯರ್ಥಿಗಳನ್ನು ವ್ಯಕ್ತಿತ್ವ ಪರೀಕ್ಷೆಗೆ ಪರಿಗಣಿಸಲಾಗುವುದು.

**ಅಭ್ಯರ್ಥಿಗಳ ಆಯ್ಕೆ ಪಟ್ಟಿ :** ಆಯೋಗವು, ಅಭ್ಯರ್ಥಿಗಳು ಲಿಖಿತ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆಯಲ್ಲಿ ಪಡೆದ ಸರಾಸರಿ ಅಂಕಗಳ ಜೇಷ್ಠತೆಯ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿಯನ್ವಯ ಲಭ್ಯವಿರುವ ಹುದ್ದೆಗಳಲ್ಲಿ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಇತರೆ ಹಿಂದುಳಿದ ವರ್ಗಗಳು ಮತ್ತು ಇತರರಿಂದ ಆಯ್ಕೆ ಮಾಡಲಾಗುವುದು.

**10. ಶೈಕ್ಷಣಿಕ ವಿದ್ಯಾರ್ಹತೆ ಮತ್ತು ವಯೋಮಿತಿ:–**

**10.1 ಶೈಕ್ಷಣಿಕ ವಿದ್ಯಾರ್ಹತೆ**

ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪಿತವಾದ ಯಾವುದೇ ವಿಶ್ವ ವಿದ್ಯಾಲಯದಿಂದ ಸಿವಿಲ್ ಇಂಜಿನಿಯರಿಂಗ್ ಅಥವಾ ಕನ್‌ಸ್ಟ್ರಕ್ಷನ್ ಟೆಕ್ನಾಲಜಿ ಮತ್ತು ಮ್ಯಾನೇಜ್‌ಮೆಂಟ್‌ನಲ್ಲಿ ಬಿ.ಇ. ಪದವಿ ಪಡೆದಿರಬೇಕು ಮತ್ತು ಸಂಸ್ಥೆಯು ಎ.ಐ.ಸಿ.ಟಿ.ಇ.ನಿಂದ ಮಾನ್ಯತೆ ಪಡೆದಿರಬೇಕು ಅಥವಾ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ (ಭಾರತ) ಇವರು ನಡೆಸುವ ಭಾಗ 'ಎ' ಮತ್ತು 'ಬಿ' ಅಸೋಸಿಯೇಟ್ ಮೆಂಬರ್ ಶಿಪ್ ಎಕ್ಸಾಮಿನೇಷನ್‌ನಲ್ಲಿ ಉತ್ತೀರ್ಣರಾಗಿದ್ದು, ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ (ಭಾರತ) ಇವರು ನೀಡುವ ಡಿಪ್ಲೊಮ ಪ್ರಮಾಣ ಪತ್ರವನ್ನು ಪಡೆದಿರಬೇಕು. [Candidates must be holder of a Degree in Civil Engineering or Construction Technology & Management granted by a University established by Law in India and from an Institute approved by the AICTE, or a Diploma Certificate from the Institution of

Engineers (India) that he has passed Part A & B of the Associate Membership Examination of the Institution of Engineers (India)].

10.2 **ವಯೋಮಿತಿ**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು 21 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

**ಗರಿಷ್ಠ ವಯೋಮಿತಿ:**

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| ಪ್ರವರ್ಗ – 2ಎ, 2ಬಿ, 3ಎ, 3ಬಿ | 38 ವರ್ಷ |
| ಪ.ಜಾ/ಪ.ಪಂ/ಪ್ರ–1 | 40 ವರ್ಷ |

"ಸೇವೆಯಲ್ಲಿರುವವರಿಂದ ತುಂಬ ಬೇಕಾದ ಹುದ್ದೆ"ಗಳಿಗೆ ಅರ್ಜಿ ಸಲ್ಲಿಸುವ ಲೋಕೋಪಯೋಗಿ ಇಲಾಖೆಯ ಸೇವಾನಿರತ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿಯನ್ನು ನಿಗದಿಪಡಿಸಿರುವುದಿಲ್ಲ. ಸೇವೆಯಲ್ಲಿರುವವರಿಂದ ಮತ್ತು ಹೊರಗಿನ ಅಭ್ಯರ್ಥಿಗಳ ಮೂಲಕ ತುಂಬಲಾಗುವ ಹುದ್ದೆಗಳಿಗೆ ಒಂದೇ ಪರೀಕ್ಷೆಯನ್ನು ನಡೆಸಲಾಗುವುದು.

10.3 ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರ ಕೇಂದ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:–** (1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ, ಆದರೆ ಡಿಫೆನ್ಸ್ ಸೆಕ್ಯುರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ; ಮತ್ತು

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

**ವಿವರಣೆ:–** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

ಜನ್ಮ ದಿನಾಂಕಕ್ಕಾಗಿ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿ, ವರ್ಗಾವಣೆ ಪ್ರಮಾಣ ಪತ್ರ (ಟಿ..ಸಿ./ಕ್ಯುಮುಲೇಟಿವ್ ರೆಕಾರ್ಡ್)ದಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಆಯೋಗವು ಒಪ್ಪಿಕೊಳ್ಳುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

11. **ಜಾತಿ ಮೀಸಲಾತಿ ಪ್ರಮಾಣ ಪತ್ರಗಳು :–**

ಜಾತಿ ಮೀಸಲಾತಿ ಕೋರಬಯಸುವ

- ಪರಿಶಿಷ್ಠ ಜಾತಿ / ಪರಿಶಿಷ್ಠ ಪಂಗಡದ ಅಭ್ಯರ್ಥಿಗಳು ನಮೂನೆ 'ಡಿ' ನಲ್ಲಿ,
- ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ನಲ್ಲಿ ಹಾಗೂ

- ಪ್ರವರ್ಗ–2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ ಸಂಬಂಧಿತ ತಹಶೀಲ್ದಾರ್ ರವರಿಂದ ಅರ್ಜಿ ಸಲ್ಲಿಸುವ ದಿನಾಂಕದಂದು ಚಾಲ್ತಿಯಲ್ಲಿರುವ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು (ಈ ಪ್ರಮಾಣ ಪತ್ರಗಳ ನಮೂನೆಯನ್ನು ಅರ್ಜಿಯೊಂದಿಗೆ ನೀಡಲಾಗುವ ಮಾಹಿತಿ ಪುಸ್ತಕದ "ಅನುಬಂಧ–1"ರಲ್ಲಿ ತೋರಿಸಲಾಗಿದೆ).

**12. ಗ್ರಾಮೀಣ ಅಭ್ಯರ್ಥಿ:**

ಗ್ರಾಮೀಣ ಅಭ್ಯರ್ಥಿಗಳಿಗಿರುವ ಹುದ್ದೆಗಳ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ–2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಶಾಲಾ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲು ಸಹಿ ಪಡೆದು ಸಲ್ಲಿಸತಕ್ಕದ್ದು. ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1ರಲ್ಲಿ ಮೇಲುಸ್ತರಕ್ಕೆ ಸೇರದಿರುವ ಬಗ್ಗೆ ಪ್ರಮಾಣ ಪತ್ರವನ್ನು ತಹಶೀಲ್ದಾರ್ ರವರಿಂದ ಪಡೆದು ಸಲ್ಲಿಸತಕ್ಕದು.

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ, (ನಮೂನೆ–1ನ್ನು ಲಗತ್ತಿಸದಿದ್ದಲ್ಲಿ) ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅರ್ಜಿಯೊಂದಿಗೆ ನೀಡಲಾಗುವ ಮಾಹಿತಿ ಪುಸ್ತಕದ "ಅನುಬಂಧ–1"ರಲ್ಲಿ ತೋರಿಸಲಾಗಿದೆ).

**13. ಕನ್ನಡ ಮಾಧ್ಯಮ ಅಭ್ಯರ್ಥಿ:**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರು ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. (ಈ ಪ್ರಮಾಣ ಪತ್ರದ ನಮೂನೆಯನ್ನು ಅರ್ಜಿಯೊಂದಿಗೆ ನೀಡಲಾಗುವ ಮಾಹಿತಿ ಪುಸ್ತಕದ "ಅನುಬಂಧ–1"ರಲ್ಲಿ ತೋರಿಸಲಾಗಿದೆ).

**14. ಪರೀಕ್ಷಾ ಶುಲ್ಕ ಮತ್ತು ಅದನ್ನು ಪಾವತಿ ಮಾಡುವ ರೀತಿ**

14.1 ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1 ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ ರೂ. 300/–.
ಸಾಮಾನ್ಯ ಅರ್ಹತೆ, ಪ್ರವರ್ಗ 2ಎ, 2ಬಿ, 3ಎ, 3ಬಿ ನ ಅಭ್ಯರ್ಥಿಗಳಿಗೆ ರೂ. 500/–

14.2 ಭರ್ತಿ ಮಾಡಿದ ಅರ್ಜಿಗಳನ್ನು ನಿಗದಿತ ಪರೀಕ್ಷಾ ಶುಲ್ಕದೊಂದಿಗೆ "ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು" ಇವರಿಗೆ ಸಂದಾಯವಾಗುವಂತೆ ಐ.ಪಿ.ಓ/ಡಿ.ಡಿ ಯನ್ನು ಪಡೆದು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಸಲ್ಲಿಸತಕ್ಕದ್ದು.

14.3 ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಆಯೋಗವು ನಡೆಸುವ ಇತರೆ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

14.4 ಯಾವುದೇ ಅಭ್ಯರ್ಥಿಗಳು ಮೇಲೆ ತಿಳಿಸಿರುವ ಶುಲ್ಕವನ್ನು ಪಾವತಿಸದಿದ್ದಲ್ಲಿ ಅಂತಹವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**15. ಪ್ರಾಮುಖ್ಯವಾದ ಸೂಚನೆಗಳು**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸುವ ಪ್ರಮಾಣ ಪತ್ರಗಳಿಗೆ ಪುಟ ಸಂಖ್ಯೆಯನ್ನು ನೀಡಿ, ಅದನ್ನು ಅರ್ಜಿಯೊಂದಿಗೆ ನೀಡಲಾಗುವ ಚೆಕ್‌ಲಿಸ್ಟ್‌ನಲ್ಲಿ ನಮೂದಿಸತಕ್ಕದ್ದು. ಹಾಗೂ ಚೆಕ್‌ಲಿಸ್ಟ್‌ನ ಎರಡೂ ಪ್ರತಿಗಳನ್ನು ಸೂಕ್ತವಾಗಿ ಭರ್ತಿ ಮಾಡಿ ತಪ್ಪದೆ ಅರ್ಜಿಯೊಡನೆ ಸಲ್ಲಿಸತಕ್ಕದ್ದು.

1) ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಪ್ರಮಾಣ ಪತ್ರಗಳು/ಎಲ್ಲಾ ವರ್ಷಗಳ ಅಂಕಪಟ್ಟಿಗಳು/ಪದವಿಯ ಘಟಿಕೋತ್ಸವ ಪ್ರಮಾಣ ಪತ್ರ.
2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಅಂಕಪಟ್ಟಿ / ವರ್ಗಾವಣೆಯ ಪ್ರಮಾಣ ಪತ್ರ(ಟಿ.ಸಿ.) / ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉಧೃತ ಭಾಗ (Extract of the Cumulative Record)
3) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

4) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್‌ರಿಂದ ಪಡೆದ ಪ್ರಮಾಣ ಪತ್ರ.(ಮೀಸಲಾತಿ ಕೋರಿದ್ದಲ್ಲಿ)
5) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
6) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
7) ಅಭ್ಯರ್ಥಿಗಳು ಅರ್ಜಿಗಳನ್ನು ಸ್ಪಷ್ಟವಾಗಿ ಆಂಗ್ಲ ಭಾಷೆಯಲ್ಲಿ (In capital letters) ದಪ್ಪ ಅಕ್ಷರಗಳಲ್ಲಿ ಭರ್ತಿ ಮಾಡತಕ್ಕದ್ದು.
8) ಅಪೂರ್ಣವಾಗಿರುವ, ಫೋಟೋ ಲಗತ್ತಿಸಿಲ್ಲದ ಮತ್ತು ಸಹಿ ಮಾಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
9) ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ ಅವರುಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಆಯೋಗವು ಪರಿಶೀಲಿಸಿ ಮೇಲು ನೋಟಕ್ಕೆ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ಜಾರಿ ಮಾಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ, ಇತ್ಯಾದಿಗಳಿಗೂ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಇಲ್ಲದಿದ್ದಲ್ಲಿ ಅಥವಾ ತಪ್ಪು ಮಾಹಿತಿ ನೀಡಿದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
10) ವ್ಯಕ್ತಿತ್ವ ಪರೀಕ್ಷೆಗೆ ಆಯ್ಕೆಯಾಗುವ ಅಭ್ಯರ್ಥಿಗಳು ವ್ಯಕ್ತಿತ್ವ ಪರೀಕ್ಷೆಯ ಸಮಯದಲ್ಲಿ ಅರ್ಜಿಯೊಂದಿಗೆ ಲಗತ್ತಿಸಿದ ದಾಖಲೆಗಳ ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

**16. ಆಯೋಗದೊಡನೆ ಪತ್ರ ವ್ಯವಹಾರ**

ಆಯೋಗವು ಅಭ್ಯರ್ಥಿಕೆಯ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಆದಾಗ್ಯೂ ಅಭ್ಯರ್ಥಿಗೆ ಪರೀಕ್ಷೆಗಾಗಿ ಪ್ರವೇಶ ಪತ್ರ ಬಾರದಿದ್ದಲ್ಲಿ, ಅಭ್ಯರ್ಥಿಯು ಆಯೋಗದ ಕಛೇರಿಯನ್ನು ಸಂಪರ್ಕಿಸತಕ್ಕದ್ದು. ಪರೀಕ್ಷಾ ಪ್ರವೇಶಕ್ಕೆ ಅನುಮತಿಸಲಾದ ಅಭ್ಯರ್ಥಿಯಾಗಿದ್ದರೆ ಪ್ರವೇಶ ಪತ್ರ ಅಥವಾ ಪ್ರವೇಶ ಪತ್ರದ ನಕಲನ್ನು ನೀಡಲಾಗುವುದು. ಪ್ರವೇಶ ಪತ್ರ ಹೊಂದಿಲ್ಲದ ಅಭ್ಯರ್ಥಿಗೆ ಪರೀಕ್ಷೆಯನ್ನು ಬರೆಯಲು ಅನುಮತಿಸುವುದಿಲ್ಲ.

ಪರೀಕ್ಷೆಯ ಪ್ರವೇಶಕ್ಕಾಗಿ ನೀಡುವ ಪ್ರವೇಶ ಪತ್ರದಲ್ಲಿ ಕೆಲವು ಅಭ್ಯರ್ಥಿಗಳ ಹೆಸರನ್ನು ತಾಂತ್ರಿಕ ಕಾರಣದಿಂದಾಗಿ ಮೊಟಕುಗೊಳಿಸಲಾಗುವುದು ಎಂಬುದನ್ನು ಅಭ್ಯರ್ಥಿಗಳು ಗಮನಿಸತಕ್ಕದ್ದು.

ಆಯೋಗದಿಂದ ನೀಡಲಾದ ಪ್ರವೇಶ ಪತ್ರವನ್ನು ಹೊಂದದ ಹೊರತು ಯಾವುದೇ ವ್ಯಕ್ತಿ ಪರೀಕ್ಷೆಗೆ ಹಾಜರಾಗುವಂತಿಲ್ಲ. ಅಭ್ಯರ್ಥಿಗೆ ಈ ಪರೀಕ್ಷೆಗೆ ಅರ್ಹತೆ ನೀಡುವ ಬಗ್ಗೆ ಆಯೋಗದ ನಿರ್ಧಾರವೇ ಅಂತಿಮವಾಗಿರುತ್ತದೆ.

ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಬೇಕಾದ ಸಂದರ್ಭದಲ್ಲಿ ಅವರ ಮನವಿ ಈ ಕೆಳಕಂಡ ಮಾಹಿತಿಗಳನ್ನು ಒಳಗೊಂಡಿರಬೇಕು:–

(i) ಆಯೋಗದಿಂದ ನೀಡಲಾದ ಪ್ರವೇಶ ಪತ್ರದ ನೋಂದಣಿ ಸಂಖ್ಯೆ
(ii) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)
(iii) ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ (ದೂರವಾಣಿ ಸಂಖ್ಯೆಯೊಂದಿಗೆ)
(iv) ಅರ್ಜಿ ಸ್ವೀಕೃತಿ ಪ್ರತಿ
(v) ಅರ್ಜಿಯ ನಕಲು ಪ್ರತಿ

**17. ವಿಶೇಷ ಸೂಚನೆಗಳು**

(1) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.
(2) ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ನಮೂನೆಯಲ್ಲಿರುವ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ದೃಢೀಕರಿಸಿ ಸಲ್ಲಿಸತಕ್ಕದ್ದು.
(3) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**18. ದುರ್ನಡತೆ**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ

ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯೋಗದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಭಿಸಿರುವನೆಂದು, ಕಂಡುಬಂದಲ್ಲಿ ಅವನು / ಅವಳು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಆಯೋಗವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಅಥವಾ ನಿರ್ದಿಷ್ಟ ಅವಧಿಗೆ ಡಿಬಾರ್ ಮಾಡಲಾಗುವುದು.

**ಡಾ. ಹೆಚ್.ವಿ. ಪಾರ್ಶ್ವನಾಥ್**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.491

**ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ನಾವಿಕ ಶಿಲ್ಪಿಯವರ ಕಛೇರಿ, ಬೈತಖೋಲ್, ಕಾರವಾರ–581302**
**ಟೆಂಡರ್ ಅಧಿಸೂಚನೆ ಸಂಖ್ಯೆ: ಜಿಎನ್‌ಎಲ್: ಕ್ರ.ಸಂ.1: 2007–08, ದಿನಾಂಕ:16ನೇ ಜುಲೈ, 2007**

ಕರ್ನಾಟಕ ರಾಜ್ಯ ಬಂದರುಗಳಲ್ಲೊಂದಾದ ಕಾರವಾರ ಬಂದರಿನಲ್ಲಿ ಸುರಕ್ಷಿತವಾಗಿ ಹಡಗುಗಳನ್ನು ಧಕ್ಕೆಗೆ ತರಲು ಮತ್ತು ಧಕ್ಕೆಯಿಂದ ನಿರ್ಗಮಿಸಲು ಟೈಮ ಚಾರ್ಟರ ಆಧಾರದ ಮೇಲೆ 15 ಟನ್ನು ಬೋಲಾರ್ಡ ಪುಲ್ ಸಾಮರ್ಥ್ಯವುಳ್ಳ ಅಂದಾಜು 2.5 ಮೀಟರ್ ಡ್ರಾಫ್ಟ್ ಉಳ್ಳ 1 ಜಗ್ಗು ನಾವೆ (Tug) ಯನ್ನು ನೌಕಾ ಚಟುವಟಿಕೆಗಳ ಸಂಬಂಧ ಕಾರ್ಯದಲ್ಲಿ ಒದಗಿಸುವ ಬಗ್ಗೆ ಅನುಭವವುಳ್ಳ ಜಗ್ಗು ನಾವೆ ಅರ್ಹ ಮಾಲಿಕರಿಂದ ಮೊಹರ ಮಾಡಿದ ಸ್ಪರ್ಧಾತ್ಮಕ ಟೆಂಡರನ್ನು ಆಹ್ವಾನಿಸಲಾಗಿದೆ.

1) ಟೆಂಡರ್ ಶೆಡ್ಯೂಲ್ಡ್‌ನ್ನು ಪಡೆಯಲಿಚ್ಚಿಸುವ ಟೆಂಡರುದಾರರು ಟೆಂಡರ್ ಫೀ ಬಾಬ್ತು ರೂ.2000–00 (ಎರಡು ಸಾವಿರ) + ವ್ಯಾಟ್ @ 12.5% + (200–00 ಅಂಚೆ ವೆಚ್ಚ ಅಂಚೆದ್ವಾರ ಕಳುಹಿಸಬೇಕಾದಲ್ಲಿ) ಬೇಡಿಕೆ ಹುಂಡಿ ರೂಪದಲ್ಲಿ ನಾವಿಕ ಶಿಲ್ಪಿ ಕಾರವಾರ ಇವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಕೋರಿಕೆ ಅರ್ಜಿಯೊಂದಿಗೆ ಒಪ್ಪಿಸುವುದು. ಕೋರಿಕೆ ಪತ್ರ ಸಲ್ಲಿಸಲು ಕೊನೆಯ ದಿನಾಂಕ:24.08.2007.

2) ಟೆಂಡರ್ ಶೆಡ್ಯೂಲ್ಡ್‌ನ್ನು ದಿನಾಂಕ:27.08.2007 ರಿಂದ 31.08.2007 ರವರೆಗೆ ಈ ಕಛೇರಿಯಿಂದ ನೀಡಲಾಗುವುದು.

3) ಭರ್ತಿ ಮಾಡಿದ ಟೆಂಡರನ್ನು ದ್ವಿಪ್ರತಿಯಲ್ಲಿ ಇ.ಎಂ.ಡಿ. ಯೊಂದಿಗೆ ದಿನಾಂಕ: 21.09.2007ರ 4.00 ಗಂಟೆಯೊಳಗೆ ನಾವಿಕ ಶಿಲ್ಪಿ, ಕಾರವಾರ ಇವರಿಗೆ ತಲುಪತಕ್ಕದ್ದು. ತಾಂತ್ರಿಕ ಬಿಡ್ಡನ್ನು ಅದೇ ದಿನ 4.30 ಗಂಟೆಗೆ ಉಪಸ್ಥಿತರಿದ್ದ ಟೆಂಡರುದಾರರ ಸಮ್ಮುಖದಲ್ಲಿ ಸಾಧ್ಯವಾದಲ್ಲಿ ತೆರೆಯಲಾಗುವುದು.

4) ಟೆಂಡರ್ ನಮೂನೆಯ ಬೆಲೆಯನ್ನು ಹಿಂದಕ್ಕೆ ನೀಡಲಾಗುವುದಿಲ್ಲ, ಅಂಚೆ ಮೂಲಕ ರವಾನಿಸಿದ ಟೆಂಡರು ತಡವಾಗಿ ಮುಟ್ಟಿದ: ಕಳೆದು ಹೋದ ಬಗ್ಗೆ ಈ ಕಛೇರಿಯು ಜವಾಬ್ದಾರರಲ್ಲ.

ನಾವಿಕ ಶಿಲ್ಪಿ, ಕಾರವಾರ.

**DEPARTMENT OF PORTS & INLAND WATER TRANSPORT**
**OFFICE OF THE MARINE ENGINEER, BAITHKOL, KARWAR-581302**
**TENDER NOTIFICATION**
**No. GNL/ CR-1: 2007-08, Dated:16th July, 2007**

Sealed Tenders are invited for "Providing 1 No. of 15 Ton Ballard Pull Tug with approximate draft of 2.5 Mts, on time charter for safe berthing/ unberthing of Ships at Karwar Port in Karnataka State" from reputed Tug Owners/ Operators having previous experience in handling vessels, Towage, search and rescue operation, other Marine activities etc.

1) Last date for the receipt of application requesting issue of Tender document along with Rs.2000/-+Vat @ 12.5% D.D. drawn in any Nationalised Bank in favour of Marine Engineer, Karwar, payable at Karwar on 24.08.2007 (Rs.200/-extra if required by post.)

2) Tender documents will be issued on 27.08.2007 to 31st of August 2007.

3) The completed Tender form along with E.M.D. shall reach The Marine Engineer, Karwar on or before 16.00 Hrs. of 21.09.2007 in duplicate and the Technical bid will be opened on the same day at 16.30 Hrs. in the presence of the bidders if possible.

4) Cost of Tender documents is not refundable and this office is not responsible for any delay or loss of Tender form in transit.

PD-84

Marine Engineer, Karwar.

## ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ
## ಜಂಟಿ ನಿರ್ದೇಶಕರವರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ
## ಪ್ರಕಟಣೆ

**ಸಂಖ್ಯೆ: ಜಿಕೈಕೇ/ಶಿ/ ಅಧೀ/ ಅ.ಪೀ.ವಿ/ 2007–08, ದಿನಾಂಕ:7ನೇ ಆಗಸ್ಟ್, 2007**

**ವಿಷಯ:** ಕಛೇರಿಯ ಅನುಪಯುಕ್ತ ಪೀಠೋಪಕರಣಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಕಛೇರಿಯ ಹಾಗೂ ರದ್ದಾದ ತಾಲ್ಲೂಕು ಕೈಗಾರಿಕಾ ಕೇಂದ್ರ ಕಛೇರಿಗಳ ರೂ.149023/– ಮೊಬಲಗಿನ ಅನುಪಯುಕ್ತ ಪೀಠೋಪಕರಣಗಳನ್ನು ದಿನಾಂಕ:13.09.2007ರ ಗುರುವಾರದಂದು ಮಧ್ಯಾಹ್ನ 12–30 ಗಂಟೆಗೆ ಜಂಟಿ ನಿರ್ದೇಶಕರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗದ ಆವರಣದಲ್ಲಿ ಹರಾಜು ಮಾಡಲಾಗುವುದು. ಹರಾಜಿನ ನಿಯಮಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಪಡೆದುಕೊಳ್ಳಬಹುದಾಗಿರುತ್ತದೆ.

ಜಂಟಿ ನಿರ್ದೇಶಕರು,
ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ.

ಪಿ.ಆರ್.503

## ಲೋಕೋಪಯೋಗಿ ಇಲಾಖೆ
## ಕಾರ್ಯನಿರ್ವಾಹಕ ಇಂಜಿನೀಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಕಛೇರಿ, ಉಡುಪಿ
## ಟೆಂಡರ್ ಪ್ರಕಟಣೆ
## (ಎರಡು ಲಕೋಟೆ ಪದ್ಧತಿ)

**ನಂ. ಕಾನಿಇಂ: ಬಂಮೀವಿ: ಎಇ: ಹೂಳೆತ್ತುವ ಕಾಮಗಾರಿ: 459: 2007–08, ದಿನಾಂಕ:26ನೇ ಜುಲೈ, 2007**

**ಕಾಮಗಾರಿಯ ಹೆಸರು:** ಉಡುಪಿ ತಾಲ್ಲೂಕಿನ ಮಲ್ಪೆ ವಾಣಿಜ್ಯ ಬಂದರಿನ ಕಾರ್ಗೋ ವಾರ್ಫ್ ವಿಸ್ತರಣೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗೆ ನಮೂದಿಸಿದ ಕಾಮಗಾರಿಯನ್ನು ನಿರ್ವಹಿಸಲು ನಿಗದಿತ ನಮೂನೆಯಲ್ಲಿ ಎರಡು ಲಕೋಟೆ ಪದ್ಧತಿಯಲ್ಲಿ ಸೀಲು ಮಾಡಿದ ಐಟಂ ದರದ ಪ್ರತ್ಯೇಕ ಟೆಂಡರುಗಳನ್ನು PWD/ CPWD ಇಲಾಖೆಯಲ್ಲಿ ನೋಂದಾಯಿತ 1ನೇ ದರ್ಜೆಯ ಗುತ್ತಿಗೆದಾರರಿಂದ ಈ ಕೆಳಗೆ ಸಹಿ ಮಾಡಿದವರು PWG-65 ಹಾಗೂ PWG-66 ರಲ್ಲಿಯ ನಿಬಂಧನೆಗಳು. ಗುತ್ತಿಗೆ ಶೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಆಹ್ವಾನಿಸಿರುತ್ತಾರೆ.

ಭರ್ತಿ ಮಾಡಿದ ಟೆಂಡರುಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರುಗಳ ಕಛೇರಿಯಲ್ಲಿ ದಿನಾಂಕ:28.09.2007ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಹಾಗೂ ಸ್ವೀಕೃತವಾದ ಟೆಂಡರುಗಳನ್ನು ಸಾಧ್ಯವಾದಲ್ಲಿ ಅದೇ ದಿನ ತೆರೆಯಲಾಗುವುದು. ನಿಬಂಧನೆಗಳೊಂದಿಗೆ ಸಲ್ಲಿಸಿದ ಟೆಂಡರುಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.

| ಕ್ರ.ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ | ಮುಂಗಡ ಠೇವಣಿ (ರೂ. ಲಕ್ಷಗಳಲ್ಲಿ) | ಕಾಮಗಾರಿಯನ್ನು ಮುಗಿಸಲು ಕಾಲಾವಧಿ (ಮಳೆಗಾಲದ ಅವಧಿ ಸೇರಿ) | ಖಾಲಿ ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) | ಟೆಂಡರು ಫಾರಂಗಾಗಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | ಖಾಲಿ ಟೆಂಡರು ಫಾರಂ ವಿತರಿಸುವ ದಿನಾಂಕ | ಭರ್ತಿ ಮಾಡಿದ ಟೆಂಡರು ಸಲ್ಲಿಸುವ ದಿನಾಂಕ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1. | ಉಡುಪಿ ತಾಲ್ಲೂಕಿನ ಮಲ್ಪೆ ವಾಣಿಜ್ಯ ಬಂದರಿನ ಕಾರ್ಗೋ ವಾರ್ಫ್ ವಿಸ್ತರಣೆ | ರೂ.200.00 | 2.00 | 15 ತಿಂಗಳು | 18,000.00 + ತೆರಿಗೆ | 27.9.2007 | 27.9.2007 | 28.9.2007 4.00 ಗಂಟೆಯವರೆಗೆ |

ಟೆಂಡರ್ ಫಾರ್ಮ್‌ಗಾಗಿ ಅರ್ಜಿ ಸಲ್ಲಿಸುವ ಗುತ್ತಿಗೆದಾರರು ತಮ್ಮ ಅರ್ಜಿಯ ಜೊತೆ ಈ ಕೆಳಗಿನ ವಿವರ: ಪ್ರಮಾಣ ಪತ್ರಗಳನ್ನು ನೀಡತಕ್ಕದ್ದು ಇಲ್ಲವಾದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

1) ಕರ್ನಾಟಕ ಲೋಕೋಪಯೋಗಿ ಇಲಾಖೆ/ C.P.W.D. ಇಲಾಖೆಯಲ್ಲಿ 1ನೇ ದರ್ಜೆಯ ಗುತ್ತಿಗೆದಾರರೆಂದು ನೊಂದಾಯಿಸಿದ ಪ್ರಮಾಣ ಪತ್ರದ ಪ್ರತಿ.

2) ಹಿಂದಿನ 5 ವರ್ಷಗಳಲ್ಲಿ, ಟೆಂಡರಿಗಿಟ್ಟಿರುವ ಕಾಮಗಾರಿ ಮೊತ್ತದ ಕನಿಷ್ಠ 30%ಕ್ಕಿಂತ ಕಡಿಮೆ ಇರದ ಮೊತ್ತದ ಯಾವುದಾದರೂ ಒಂದು ಇಂತಹದೇ ಕಾಮಗಾರಿಯನ್ನು (ಡಯಾಫ್ರಮ್ ವಾಲ್, ಪ್ಯಾಲ್‌ಫೌಂಡೇಶನ್ ಮತ್ತು ಡ್ರೆಜಿಂಗ್) ಒಂದೇ ಆರ್ಥಿಕ ವರ್ಷದಲ್ಲಿ ನಿರ್ವಹಿಸಿದ ಬಗ್ಗೆ ಕಾರ್ಯನಿರ್ವಾಹಕ ಇಂಜಿನಿಯರ್ ಹಾಗೂ ಮೇಲ್ಪಟ್ಟ ಅಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.

3) ಇತ್ತೀಚಿನ ಆದಾಯ ತೆರಿಗೆ ಹಾಗೂ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರಗಳು.

4) ಕೆಲಸಗಳ ಉಸ್ತುವಾರಿಗಾಗಿ ಲಭ್ಯವಿರುವ ತಾಂತ್ರಿಕ ಸಿಬ್ಬಂದಿ ಹಾಗೂ ಅವರ ವಿದ್ಯಾರ್ಹತೆ ಮತ್ತು ಅನುಭವ.

5) ರಿಜಿಸ್ಟ್ರೇಷನ್ ಪಾಸ್ ಬುಕ್.

6) ಈ ಕಾಮಗಾರಿ ನಿರ್ವಹಿಸಲು ಗುತ್ತಿಗೆದಾರರಲ್ಲಿರುವ ಸುಸಜ್ಜಿತ ಹಾಗೂ ಕಾಮಗಾರಿ ನಿರ್ವಹಿಸಬಲ್ಲ ಪ್ರಮುಖ ಯಂತ್ರೋಪಕರಣಗಳು ಮತ್ತು ಸಾಧನ ಸಲಕರಣೆಗಳು ಟ್ರೆನ್‌ಚಿಂಗ್ ಮೆಶೀನ್ ಅಥವಾ ಪುಲ್ಲಿ ಗ್ರಾಬ್ ನೊಂದಿಗಿನ ಕ್ರೇನ್, ಎಕ್ಸಾವೇಟರ್/ JCB, ಬೋರಿಂಗ್ ರಿಗ್, ಕಾಂಕ್ರೀಟ್ ಮಿಕ್ಸರ್ ಹಾಗೂ ಟಿಪ್ಪರ್ಸ್ ಕಟ್ಟರ್ ಸೆಕ್ಷನ್ ಡ್ರೆಜ್ಜರ್ ಮತ್ತು ಹೂಪರ್ ಬಾರ್ಜ್‌ನೊಂದಿಗಿನ ಗ್ರ್ಯಾಬ್ ಡ್ರೆಜ್ಜರ್ ಹಾಗೂ ಅವುಗಳ ಮಾಲೀಕತ್ವದ ಬಗ್ಗೆ ದಾಖಲೆಗಳ ದೃಢೀಕೃತ ಪ್ರತಿಗಳು.

7) ಗುತ್ತಿಗೆದಾರರ ಆರ್ಥಿಕ ಸಾಮರ್ಥ್ಯದ ವಿವರ.

ಟೆಂಡರುಗಳನ್ನು ಎರಡು ಲಕೋಟೆ ಪದ್ಧತಿಯಲ್ಲಿ ಕರೆಯಲಾಗಿದ್ದು (1) ಸೆಕ್ಷನ್–1 (ತಾಂತ್ರಿಕ್ ಬಿಡ್) ಹಾಗೂ (2) ಸೆಕ್ಷನ್–II (ಆರ್ಥಿಕ ಬಿಡ್) ಆಗಿದ್ದು, ನಿಗದಿತ ನಮೂನೆಯಲ್ಲಿ ದ್ವಿ ಪ್ರತಿಯಲ್ಲಿ ಸಲ್ಲಿಸತಕ್ಕದ್ದು.

**ಲಕೋಟೆ–1: ತಾಂತ್ರಿಕ ಬಿಡ್ (ಅರ್ಹತೆಯನ್ನು ನಿರ್ಧರಿಸುವ ಭಾಗ)**

ಈ ಲಕೋಟೆಯಲ್ಲಿ ಕೆಳಗಿನ ವಿವರಗಳನ್ನು ಮತ್ತು ಪ್ರಮಾಣ ಪತ್ರಗಳನ್ನು ಸೇರಿಸಿ ಸೀಲ್ ಮಾಡಿ ತಾಂತ್ರಿಕ ಬಿಡ್ ಎಂದು ಬರೆದು ಸಲ್ಲಿಸತಕ್ಕದ್ದು.

1) ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆ ಒಂದನೇ ದರ್ಜೆಯ ಅಥವಾ C.P.W.D. ಇಲಾಖೆಯ 1ನೇ ದರ್ಜೆ ಮತ್ತು ಮೇಲ್ಪಟ್ಟ ಶ್ರೇಣಿಯ ಗುತ್ತಿಗೆ ನೊಂದಣಿ ಪತ್ರ.

2) ಟೆಂಡರಿಗಿಟ್ಟ ಮೊತ್ತದ ಶೇಕಡಾ 30ಕ್ಕಿಂತ ಕಡಿಮೆ ಇರದಂತೆ ಇದೇ ಮಾದರಿಯ ಒಂದು ಕಾಮಗಾರಿಯನ್ನು (ಡಯಾಫ್ರಮ್ ವಾಲ್, ಪೈಲ್ ಫೌಂಡೇಶನ್ ಮತ್ತು ಡ್ರೆಜಿಂಗ್) ಕಳೆದ 5 ಆರ್ಥಿಕ ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ಯಶಸ್ವಿಯಾಗಿ ಮಾಡಿ ಮುಗಿಸಿದ ಬಗ್ಗೆ ಕಾರ್ಯ ನಿರ್ವಾಹಕ ಇಂಜಿನಿಯರ್ ಅಥವಾ ಅದಕ್ಕಿಂತ ಮೇಲ್ಪಟ್ಟ ಅಧಿಕಾರಿಯವರಿಂದ ಪ್ರಮಾಣ ಪತ್ರ, ಪ್ರಮಾಣ ಪತ್ರದಲ್ಲಿ ನಿರ್ವಹಿಸಿರುವ ಕಾಮಗಾರಿಯ ಮಾದರಿಯನ್ನು ಹೇಳಿರಲೇಬೇಕಿರುತ್ತದೆ ಹಾಗೂ ಈ ದಾಖಲಾತಿಗಳನ್ನು ಗೆಜೆಟೆಡ್ ಅಧಿಕಾರಿಗಳಿಂದ ಅಥವಾ ನೋಟರಿ ಪಬ್ಲಿಕ್‌ರಿಂದ ದೃಢೀಕರಿಸತಕ್ಕದ್ದು.

3) ತಾಂತ್ರಿಕ ಬಿಡ್‌ನೊಂದಿಗೆ ಲಗತ್ತಿಸಿದ ಎಲ್ಲಾ ದಾಖಲಾತಿಗಳನ್ನು ಗೆಜೆಟೆಡ್ ಅಧಿಕಾರಿಗಳಿಂದ ಅಥವಾ ನೋಟರಿ ಪಬ್ಲಿಕ್‌ರಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಟೆಂಡರುಗಳು ಅನರ್ಹಗೊಳ್ಳುತ್ತದೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ನ್ನು ಅನರ್ಹಗೊಳಿಸಲಾಗುವುದು.

4) ಗುತ್ತಿಗೆದಾರರು ತಮ್ಮಲ್ಲಿ ಹೊಂದಿರುವ ಈ ಕಾಮಗಾರಿಗೆ ಸಂಬಂಧಿಸಿದ ಯಂತ್ರೋಪಕರಣಗಳು ಮುಖ್ಯವಾಗಿ ಟ್ರೆನ್‌ಚಿಂಗ್ ಮೆಶೀನ್ ಅಥವಾ ಪುಲ್ಲಿ ಗ್ರಾಬ್ ಇರುವ ಕ್ರೇನ್, ಎಕ್ಸಾವೇಟರ್/ JCB , ಬೋರಿಂಗ್ ರಿಗ್, ಕಾಂಕ್ರೀಟ್ ಮಿಕ್ಸರ್, ಹಾಗೂ ಟಿಪ್ಪರ್ಸ್, ಕಟ್ಟರ್ ಸೆಕ್ಷನ್ ಡ್ರೆಜ್ಜರ್ ಮತ್ತು ಹೂಪರ್ ಬಾರ್ಜ್‌ನೊಂದಿಗಿನ ಗ್ರ್ಯಾಬ್ ಡ್ರೆಜ್ಜರ್ ವಿವರಗಳ ಕುರಿತಂತೆ ಖರೀದಿಸಿದ ಇನ್‌ವಾಯಿಸ್: ಸೇಲ್‌ಡೀಡ್, ಲೀಜ್ ಎಗ್ರಿಮೆಂಟ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದ ನೋಂದಣಿ ಪ್ರಮಾಣ ಪತ್ರದ ಪ್ರತಿಗಳನ್ನು ಸಲ್ಲಿಸತಕ್ಕದ್ದು.

5) E.M.D. ರೂ. 2.00 ಲಕ್ಷಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಪತ್ರಗಳು ಅಥವಾ ಮಾನ್ಯತೆ ಪಡೆದ ಶೆಡ್ಯೂಲ್ ಬ್ಯಾಂಕಿನ ಇಲ್ಲವೇ ರಾಷ್ಟ್ರೀಕೃತ ಬ್ಯಾಂಕಿನಿಂದ ಕೊಡ್ ಮಾಡಿದ ಕಾಲ್ ಡಿಪಾಸಿಟ್ ರಶೀದಿ, ಡಿ.ಡಿ. ಎಫ್‌ಡಿಆರ್, Pay Order ಅಥವಾ ಬ್ಯಾಂಕ್ ಗ್ಯಾರಂಟಿಗಳ ರೂಪದಲ್ಲಿ ಸ್ವೀಕರಿಸಲಾಗುವುದು.

6) ಹಣಕಾಸು ವ್ಯವಸ್ಥೆಯ ಬಗ್ಗೆ ರೂ.70.00 ಲಕ್ಷದ ಲೈನ್ ಆಫ್ ಕ್ರೆಡಿಟ್ ಪತ್ರ.

7) ಗುತ್ತಿಗೆದಾರರು ಹೊಂದಿರುವ ತಾಂತ್ರಿಕ ಸಿಬ್ಬಂದಿಗಳ ವಿವರಗಳು ಅವರ ವಿದ್ಯಾರ್ಹತೆಗಳ ದೃಢೀಕೃತ ಪಟ್ಟಿ.

6) ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ತಮ್ಮ ಆರ್ಥಿಕ ದೃಢತೆ ಬಗ್ಗೆ ರೂ.100.00 ಲಕ್ಷಗಳಿಗೆ ಕಡಿಮೆ ಇಲ್ಲದ ಸಾಲ್ವೆನ್ಸಿ ಸರ್ಟಿಫಿಕೇಟ್.

7) ಗುತ್ತಿಗೆದಾರರು ಈಗಾಗಲೇ ಇದೇ ಮಾದರಿಯ ಕಾಮಗಾರಿಯನ್ನು ವಹಿಸಿಕೊಂಡು ಮಾಡಿ ಮುಗಿಸಿದ ಅಥವಾ ಈಗ ಕೈಯಲ್ಲಿರುವ ಕಾಮಗಾರಿಗಳು ಮತ್ತು ಅವುಗಳನ್ನು ಪೂರ್ಣಗೊಳಿಸಲು ಬೇಕಿರುವ ಅವಧಿ ಇತ್ಯಾದಿ ವಿವರಗಳು.

8) ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.

9) ಇನ್ನಿತರ ವಿವರಗಳು ಈ ಟೆಂಡರಿಗೆ ಸಂಬಂಧಿಸಿದಂತೆ,

10) ತಾಂತ್ರಿಕ ಬಿಡ್‌ನಲ್ಲಿ ನೀಡಿದ ನಮೂನೆಗಳನ್ನು ಸರಿಯಾಗಿ ಭರ್ತಿ ಮಾಡಿ ಪ್ರತಿ ಪುಟಗಳನ್ನು ತಪ್ಪದೇ ಸಹಿ ಮಾಡತಕ್ಕದ್ದು.

11) ಗುತ್ತಿಗೆದಾರರ ಆರ್ಥಿಕ ಸಾಮರ್ಥ್ಯದ ತಖ್ತೆ:

**ಲಕೋಟೆ–II ಆರ್ಥಿಕ ಬಿಡ್ (ಹಣಕಾಸಿನ ಸವಾಲು)**

ಈ ಲಕೋಟೆಯಲ್ಲಿ ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಕಛೇರಿಯಲ್ಲಿ ಕೊಡಲಾದ ಟೆಂಡರು ಫಾರಂಗಳಲ್ಲಿ ಗುತ್ತಿಗೆದಾರರು ತಮ್ಮ ದರಗಳನ್ನು ಅಕ್ಷರ ಮತ್ತು ಅಂಕಿಗಳಲ್ಲಿ ನಮೂದಿಸಿ ದ್ವಿ ಪ್ರತಿಗಳಲ್ಲಿ ಸೀಲ್ ಮಾಡಿದ ಲಕೋಟೆ ಮೇಲೆ **ಆರ್ಥಿಕ ಬಿಡ್** ಎಂದು ಬರೆದು ಸಲ್ಲಿಸತಕ್ಕದ್ದು. ದರಗಳನ್ನು ನಮೂದಿಸುವಾಗ ತಿದ್ದುಪಡಿಗಳೇನಾದರೂ ಇದ್ದಲ್ಲಿ ಅವುಗಳನ್ನು ತಮ್ಮ ಸಹಿಯೊಂದಿಗೆ ದೃಢೀಕರಿಸತಕ್ಕದ್ದು.

**ಟಿಪ್ಪಣಿ:**

1) ಪ್ರಕಟಣೆಯಲ್ಲಿ ಹೇಳಲಾದ ದಿನಾಂಕಗಳಲ್ಲಿ ಯಾವುದೇ ದಿನವು ರಜಾ ದಿನವೆಂದು ಘೋಷಿಸಿದ್ದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸುವುದು. ಸಾಧ್ಯವಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ದಿನಾಂಕ:28.09.2007ರ ಅಪರಾಹ್ನ 4.30 ಗಂಟೆಗೆ ತೆರೆಯಲಾಗುವುದು. ಇಲ್ಲವಾದಲ್ಲಿ ಅದೇ ದಿನ ತಿಳಿಯಪಡಿಸುವ ಮುಂದಿನ ಯಾವುದೇ ದಿನದಂದು ತೆರೆಯಲಾಗುವುದು.

2) ಯಾವುದೇ ಟೆಂಡರ್‌ನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು ಕಾಯ್ದಿರಿಸಿಕೊಂಡಿರುತ್ತಾರೆ.

3) ಟೆಂಡರು ಪಟ್ಟಿಗೆಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರ ಕಛೇರಿಯಲ್ಲಿ ಇಡಲಾಗಿದ್ದು ಇಚ್ಛೆಯುಳ್ಳ ಗುತ್ತಿಗೆದಾರರು ಅವರ ಟೆಂಡರುಗಳನ್ನು ದಿನಾಂಕರ ಸಂಜೆ 4.00 ಗಂಟೆಯವರೆಗೆ ಟೆಂಡರು ಪೆಟ್ಟಿಗೆಗಳಲ್ಲಿ ಹಾಕಬಹುದಾಗಿದೆ.

4) ಲಕೋಟೆ (1) ಮತ್ತು ಲಕೋಟೆ (2) ಎಂದು ನಿಚ್ಚಳವಾಗಿ ಪ್ರತ್ಯೇಕ ಲಕೋಟೆಯ ಮೇಲೆ ಕೆಲಸದ ಹೆಸರಿನೊಂದಿಗೆ ಬರೆದು ಎರಡು ಪ್ರತ್ಯೇಕ ಲಕೋಟೆಗಳನ್ನು ಸೀಲು ಮಾಡಿ ಇವುಗಳನ್ನು ಒಂದು ದೊಡ್ಡ ಲಕೋಟೆಯಲ್ಲಿರಿಸಿ ಸೀಲು ಮಾಡಿ ಕಾಮಗಾರಿ ಹೆಸರನ್ನು ನಮೂದಿಸಿ ಕಛೇರಿಯಲ್ಲಿ ಇಡಲಾದ ಪ್ರತ್ಯೇಕ ಟೆಂಡರ್ ಪೆಟ್ಟಿಗೆಯಲ್ಲಿ ಹಾಕುವುದು.

5) ಲಕೋಟೆ (1)ನ್ನು ನಿರ್ಧರಿತ ದಿನದಂದು ತೆರೆದು ಗುತ್ತಿಗೆದಾರರ ಅರ್ಹತೆಯನ್ನು ನಿರ್ಧರಿಸಲಾಗುವುದು. ಅರ್ಹತೆಯುಳ್ಳ ಗುತ್ತಿಗೆದಾರರ ಲಕೋಟೆ (2)ನ್ನು ಮಾತ್ರ ಸಂಬಂಧಿಸಿದ ಗುತ್ತಿಗೆದಾರರಿಗೆ ತಿಳಿಸಿ ತೆರೆಯಲಾಗುವುದು ಹಾಗೂ ಸೆಕ್ಷನ್–1ರಲ್ಲಿ ಅರ್ಹರಲ್ಲದ ಗುತ್ತಿಗೆದಾರರ ಆರ್ಥಿಕ ಬಿಡ್‌ನ್ನು ತಿರಸ್ಕರಿಸಲಾಗುವುದು.

6) ಕಾಮಗಾರಿಗೆ ಬೇಕಾದ ಸಿಮೆಂಟ್, ಸ್ಟೀಲ್ ಹಾಗೂ ಇತರ ಎಲ್ಲಾ ಸಾಮಾಗ್ರಿಗಳನ್ನು ಗುತ್ತಿಗೆದಾರರೇ ತಮ್ಮ ಸ್ವಂತ ಖರ್ಚಿನಿಂದ ಪೂರೈಸಿಕೊಳ್ಳತಕ್ಕದ್ದು ಹಾಗೂ ಸಾಮಾಗ್ರಿಗಳ ಗುಣಮಟ್ಟದ ಪ್ರಮಾಣ ಪತ್ರವನ್ನು ಕಾಲಕಾಲಕ್ಕೆ ಸಲ್ಲಿಸಬೇಕು.

ಹೆಚ್ಚಿನ ಮಾಹಿತಿಗಳು ಬೇಕಾದಲ್ಲಿ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ವಿವರಗಳನ್ನು ಪಡೆಯಬಹುದು.

**ಬಿ. ಗೋಪಾಲ ನಾಯಕ್**
ಪಿ.ಆರ್.486 ಕಾರ್ಯನಿರ್ವಾಹಕ ಇಂಜಿನಿಯರ್,
ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ.

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಕಛೇರಿ

## ಟೆಂಡರ್ ಅಧಿಸೂಚನೆ

**ಸಂಖ್ಯೆ: ಸನೀವಿ:ಬೀದರ್:ತಾಶಾ–3:ಟೆಂಡರ್/ ಘೋರ ಚಿಂಚೋಳಿ/ 2007/1920, ದಿನಾಂಕ:25ನೇ ಜುಲೈ, 2007**

ಕರ್ನಾಟಕ ರಾಜ್ಯದಲ್ಲಿ ಹಾಲಿ ನೋಂದಾಯಿಸಿರುವ ಅರ್ಹ 1ನೇ ದರ್ಜೆಯ ಸಿವಿಲ್ ಗುತ್ತಿಗೆದಾರರುಗಳಿಂದ ಪಿ.ಡಬ್ಲ್ಯೂಜಿ. ನಮೂನೆ 65, 66ರಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಾಗಿ ದ್ವಿಪ್ರತಿಗಳಲ್ಲಿ ಮೋಹರ್ ಬಂದ ಐಟಂ ರೇಟ್ ಟೆಂಡರುಗಳನ್ನು ಆಹ್ವಾನಿಸಲಾಗಿವೆ.

| ಕ್ರ.ಸಂ. | ಕಾಮಗಾರಿ ಹೆಸರು | ಟೆಂಡರಿಗಾಗಿ ಅಳವಡಿಸಿದ ಕಾಮಗಾರಿಯ ಮೊತ್ತ | ಇ.ಎಂ.ಡಿ. | ಖಾಲಿ ಟೆಂಡರ್ ಪುಸ್ತಕ ಬೆಲೆ (ಹಿಂತಿರುಗಿಸಲಾರದ) | ಕಾಮಗಾರಿ ನಿರ್ವಹಿಸಲು ನಿಗದಿಪಡಿಸಲಾದ ಅವಧಿ |
|---|---|---|---|---|---|
| 1 | 2 | 3 | 4 | 5 | 6 |
| 1. | ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕಿನ ಘೋರ ಚಿಂಚೋಳಿ ಗ್ರಾಮದ ಹತ್ತಿರ ಚುಳ್ಕಿನಾಲೆಗೆ ಅಡ್ಡಲಾಗಿ ಪಿಕಪ ನಿರ್ಮಾಣ. | ರೂ.48.66 ಲಕ್ಷ | ರೂ.48660/– | ರೂ.5000/– + ತೆರಿಗೆ | 8 ತಿಂಗಳು (ಮಳೆಗಾಲ ಹೊರತುಪಡಿಸಿ) |

ಟೆಂಡರ್ ನಡುವಳಿಗಳ ದಿನಾಂಕಗಳು ಮತ್ತು ವೇಳಾಪಟ್ಟಿ ಕೆಳಗಿನಂತಿದೆ.

| | | |
|---|---|---|
| 1. | ಖಾಲಿ ಟೆಂಡರ್‌ಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ (ಕಛೇರಿ ವೇಳೆಯಲ್ಲಿ) | 29.08.2007 |
| 2. | ಖಾಲಿ ಟೆಂಡರ್ ಪುಸ್ತಕ (ದ್ವಿಪ್ರತಿಗಳಲ್ಲಿ) ನೀಡುವ ದಿನಾಂಕ (ಕಛೇರಿ ವೇಳೆಯಲ್ಲಿ) | 03.09.2007 |
| 3. | ಭರ್ತಿ ಮಾಡಿರುವ ಟೆಂಡರ್‌ಗಳು ಸಲ್ಲಿಸುವ ದಿನಾಂಕ | 12.09.2007 ಸಂಜೆ 4.00 ಗಂಟೆಯವರೆಗೆ |
| 4. | ಟೆಂಡರ್‌ಗಳು ತೆರೆಯುವ ದಿನಾಂಕ (ಸಾಧ್ಯವಾದರೆ) | 12.09.2007 ಸಂಜೆ 5.00 ಗಂಟೆಗೆ |

**ಷರತ್ತುಗಳು:**

1) ಸದರಿ ಕಾಮಗಾರಿಗೆ ಬೇಕಾಗಿರುವ ಇ.ಎಂ.ಡಿ. ರಾಷ್ಟ್ರೀಕೃತ ಬ್ಯಾಂಕಿನಿಂದ ಕಾರ್ಯನಿರ್ವಾಹಕ ಅಭಿಯಂತರವರ ಹೆಸರಿನಲ್ಲಿ ಪಡೆದಿರುವ ಡಿ.ಡಿ./ ಎಫ್.ಡಿ.ಆರ್/ ಬ್ಯಾಂಕರ್ಸ್ ಚೆಕ್ಕು ಮೂಲಕ ಖಾಲಿ ಟೆಂಡರ್‌ಗಾಗಿ ಅರ್ಜಿ ಜೊತೆಯಲ್ಲಿ ಸಲ್ಲಿಸುವುದು ಹಾಗೂ ಟೆಂಡರ್ ತೆರೆಯುವ ದಿನಾಂಕದಿಂದ ಕನಿಷ್ಟ 90 ದಿನಗಳವರೆಗೆ ಚಾಲ್ತಿಯಲ್ಲಿರತಕ್ಕದ್ದು.

2) ಖಾಲಿ ಟೆಂಡರ್‌ಗಾಗಿ ಸಲ್ಲಿಸುವ ಅರ್ಜಿಯೊಡನೆ ಗುತ್ತಿಗೆದಾರರು ನೋಂದಣಿ ಪುಸ್ತಕದ ಪ್ರತಿ ಲಗತ್ತಿಸುವುದು ಹಾಗೂ ಖಾಲಿ ಟೆಂಡರ್ ಪುಸ್ತಕ ಪಡೆಯುವಾಗ ಮೂಲ ನೊಂದಣಿ ಪುಸ್ತಕ ಸಾದರ ಪಡಿಸುವುದು.

3) 25 ಪ್ರತಿಷತಗಿಂತ ಕಡಿಮೆ ಪ್ರೀಮಿಯಮ್ ಹೊಂದಿರುವ ಟೆಂಡರ್‌ಗಳು 25 ಪ್ರತಿಷತಗಿಂತ ಹೆಚ್ಚುವರಿ ಮೊತ್ತದ ಠೇವಣಿ ಡಿ.ಡಿ./ ಎಫ್.ಡಿ.ಆರ್/ ಬ್ಯಾಂಕರ್ಸ್ ಚೆಕ್ಕು ರೂಪದಲ್ಲಿ ಕಾರ್ಯನಿರ್ವಾಹಕ ಅಭಿಯಂತರವರ ಹೆಸರಿನಲ್ಲಿ ಪಡೆದು ಭರ್ತಿ ಮಾಡಿರುವ ಟೆಂಡರ್ ಜೊತೆಯಲ್ಲಿ ಸಲ್ಲಿಸುವುದು (ಉದಾ: 30% ಕಡಿಮೆ ಪ್ರೀಮಿಯಂ ಹೊಂದಿರುವ ಟೆಂಡರ್ ಕಾಮಗಾರಿಗೆ ಅಳವಡಿಸಿದ ಟೆಂಡರ್ ಮೊತ್ತದ 5% ರಷ್ಟು ಮೊತ್ತದ ಠೇವಣಿ ಮಾಡುವುದು)

4) ಖಾಲಿ ಟೆಂಡರ್ ಪುಸ್ತಕಗಳ ಬೆಲೆ ಯಾವುದೇ ಸ್ಥಿತಿಯಲ್ಲಿ ಹಿಂತಿರುಗಿಸಲಾಗುವಂತಿಲ್ಲ.

5) ಯಾವುದೇ ಅಥವಾ ಎಲ್ಲ ಟೆಂಡರ್‌ಗಳು ತಿರಸ್ಕರಿಸುವ ಹಕ್ಕು ಕಾದಿರಿಸಲಾಗಿದೆ.

6) ಅಂಚೆಯ ಮೂಲಕ ಟೆಂಡರ್ ವ್ಯವಹಾರ ಬಯಸಿದ್ದಲ್ಲಿ ಅಂಚೆಯಲ್ಲಿ ಯಾವುದಾದರೂ ವಿಳಂಬವಾದರೆ ಈ ಕಛೇರಿ ಹೊಣೆಗಾರನಾಗುವುದಿಲ್ಲ.

7) ಮೇಲೆ ನಮೂದಿಸಿರುವ ಯಾವುದಾದರೂ ದಿನಾಂಕ ಸಾರ್ವಜನಿಕ ರಜೆ ಎಂದು ಘೋಷಿಸಿದರೆ ಅದರ ಮಾರನೆ ದಿನ ವ್ಯವಹಾರ ದಿನ ಎಂದು ಪರಿಗಣಿಸತಕ್ಕದ್ದು.

**ಎಸ್. ಮಂಜುನಾಥ ಸಜ್ಜನ**

ಪಿ.ಆರ್.490

ಕಾರ್ಯನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ವಿಭಾಗ, ಬೀದರ್.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪನಿರ್ದೇಶಕರ ಕಛೇರಿ, ಶಿವಮೊಗ್ಗ**

**ಟೆಂಡರ್ ಹರಾಜು ಪ್ರಕಟಣೆ ಸಂಖ್ಯೆ: ತೋಉನಿ/ ಶಿ/ ತಾಸ1/ 2007–08, ದಿನಾಂಕ:4ನೇ ಆಗಸ್ಟ್, 2007**

ತೋಟಗಾರಿಕೆ ಉಪನಿರ್ದೇಶಕರು, ಗಾಂಧಿ ಪಾರ್ಕ್, ಶಿವಮೊಗ್ಗ ರವರ ಅಧೀನದಲ್ಲಿ ಬರುವ ಜಿಲ್ಲೆಯ ತೋಟಗಾರಿಕೆ ಕ್ಷೇತ್ರ/ ನರ್ಸರಿಯಲ್ಲಿನ ವಿವಿಧ ಫಸಲುಗಳನ್ನು ಟೆಂಡರ್/ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಈ ಕೆಳಕಂಡಂತೆ ದಿನಾಂಕಗಳನ್ನು ನಿಗದಿಪಡಿಸಲಾಗಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ/ ನರ್ಸರಿಯ ಹೆಸರು | ಫಸಲಿನ | | ಟೆಂಡರ್ ಫಾರಂ ಪಡೆಯುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ತೆರೆಯುವ ದಿನಾಂಕ/ ವೇಳೆ | ಟೆಂಡರ್ ತೆರೆಯುವ ಸ್ಥಳ ಮತ್ತು ಇಎಂಡಿ ಹಾಗೂ ಟೆಂಡರ್ ಮೊತ್ತ ಕಟ್ಟುವ ಸ್ಥಳ | ಇ.ಎಂ.ಡಿ. ಮೊತ್ತ | ಟೆಂಡರ್/ ಹರಾಜು |
|---|---|---|---|---|---|---|---|---|---|
| | | ಹೆಸರು | ಅವಧಿ | | | | | | |
| 1 | 2 | 3 | 4 | 5 | 6 | 7 | 8 | 9 | 10 |
| 1. | ಕಛೇರಿ ಸಸ್ಯಾಗಾರ, ಭದ್ರಾವತಿ | ಸಪೋಟ | 1.7.07 ರಿಂದ 31.12.07 | 5.9.07 5.00 PM | 6.9.07 11.30 AM | 6.9.07 12.30 PM | ಸಹಾಯಕ ತೋಟಗಾರಿಕೆ ನಿರ್ದೇಶಕರು, ಕಛೇರಿ ಭದ್ರಾವತಿ. | 500/– | ಟೆಂಡರ್/ ಹರಾಜು |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 2. | ಗಂಗನಕೊಪ್ಪ ತೋಟಗಾರಿಕೆ ಕ್ಷೇತ್ರ, ಹೊಸನಗರ. | ಸಪೋಟ | 1.7.07 ರಿಂದ 31.12.07 | 6.9.07 5.00 PM | 7.9.07 11.30 AM | 7.9.07 12.30 PM | ಸಹಾಯಕ ತೋಟಗಾರಿಕೆ ನಿರ್ದೇಶಕರು, ಹೊಸನಗರ. | 2000/– | ಟೆಂಡರ್/ ಮಾತ್ರ |
| 3. | ಕುಶಾವತಿ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ. | ಸಪೋಟ | 1.7.07 ರಿಂದ 31.12.07 | 4.9.07 5.00 PM | 5.9.07 11.30 AM | 5.9.07 12.30 PM | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ತೀರ್ಥಹಳ್ಳಿ | 1000/– | ಟೆಂಡರ್/ ಹರಾಜು |

**ಟೆಂಡರ್–ಯಾ–ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಪಾಲಿಸಬೇಕಾದ ನಿಯಮ (ಷರತ್ತು)ಗಳು:**

1) ಕ್ಷೇತ್ರಗಳ ಸಪೋಟ ಫಸಲನ್ನು ಟೆಂಡರ್/ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

2) ಫಸಲಿನ ಟೆಂಡರ್‌ನಲ್ಲಿ ಭಾಗವಹಿಸಲು ಇಷ್ಟವುಳ್ಳವರು ಕಛೇರಿ ವೇಳೆಯಲ್ಲಿ ನಿಗದಿತ ಟೆಂಡರ್ ಫಾರಂನ್ನು ರೂ.25/– (ರೂ.ಇಪ್ಪತ್ತೈದು) ಗಳನ್ನು ಪಾವತಿ ಮಾಡಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ಫಾರಂನಲ್ಲಿ ಮಾತ್ರ ಟೆಂಡರ್ ಸಲ್ಲಿಸಬೇಕು.

3) ಟೆಂಡರ್ ಫಾರಂನ್ನು ಭರ್ತಿ ಮಾಡಿ ಇ.ಎಂ.ಡಿ. ಮೊತ್ತ ಮತ್ತು ಟೆಂಡರ್ ಮೊತ್ತದ ಶೇ.50ರಷ್ಟು ಹಣವನ್ನು ಪ್ರತ್ಯೇಕ ಕ್ರಾಸ್ ಡಿ.ಡಿ.ಯೊಂದಿಗೆ ಲಗತ್ತಿಸಿ ಸೀಲು ಮಾಡಿದ ಲಕೋಟೆಯಲ್ಲಿ ಸಲ್ಲಿಸಬೇಕು.

4) ಇ.ಎಂ.ಡಿ. ಹಣ ಮತ್ತು ಶೇ.50 ರ ಹಣದ ಕ್ರಾಸ್ ಡಿ.ಡಿ.ಯನ್ನು ಕ್ಷೇತ್ರದ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು/ ಸಹಾಯಕ ತೋಟಗಾರಿಕೆ ನಿರ್ದೇಶಕರು ಪದನಾಮದಲ್ಲಿ ತೆಗೆಯಬೇಕು.

5) ಟೆಂಡರ್ ಫಾರಂನಲ್ಲಿ ಪೂರ್ಣ ಹೆಸರು, ವಿಳಾಸ, ಟೆಂಡರ್ ಮೊತ್ತ (ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಪ್ರತ್ಯೇಕವಾಗಿ) ಇತ್ಯಾದಿಗಳನ್ನು ಸಂಪೂರ್ಣವಾಗಿ ದಾಖಲಿಸಿ ಸಹಿ ಮಾಡಿರಬೇಕು. ಅಪೂರ್ಣ ಹಾಗೂ ಲೋಪದೋಷಿತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

6) ಯಶಸ್ವಿ ಬಿಡ್ಡುದಾರರು ಇಲಾಖೆಯೊಂದಿಗೆ ಇಲಾಖೆಯ ನಿಯಮಗಳನ್ನೊಳಗೊಂಡ ಕರಾರು ಪತ್ರವನ್ನು ಸಹಿ ಹಾಕಿ ಕರಾರು ಮಾಡಿಕೊಳ್ಳಬೇಕು ಮತ್ತು ಅದಕ್ಕೆ ಬದ್ದರಾಗಿರಬೇಕು.

7) ಮೇಲಾಧಿಕಾರಿಗಳಿಂದ ಅನುಮೋದನೆ ಬಂದ ನಂತರ 10 ದಿನದೊಳಗಾಗಿ ಉಳಿದ ಶೇ.50ರ ಮೊತ್ತವನ್ನು ಕ್ರಾಸ್ ಡಿ.ಡಿ. ಮೂಲಕ ಪಾವತಿಸಬೇಕು.

8) ಫಸಲಿನ ಕಾವಲು ಕಟ್ಟಳೆಗಳನ್ನು ಸಫಲ ಟೆಂಡರ್‌ದಾರರೆ ನೋಡಿಕೊಳ್ಳತಕ್ಕದ್ದು.

9) ಫಸಲನ್ನು ಕಟಾವು ಮಾಡಿಕೊಳ್ಳುವ ಅವಧಿಗೆ ಕಟಾವು ಸೀಮಿತಗೊಳಿಸಬೇಕು. ಬಲಿತ ಕಾಯಿಗಳನ್ನು ಮಾತ್ರ ಕೊಯಿಲು ಮಾಡಲು ಅವಕಾಶವಿರುತ್ತದೆ.

10) ಫಸಲು ಯಾವುದೇ ಪ್ರಕೃತಿ ವಿಕೋಪಕ್ಕೆ ಹಾನಿಯಾದರೆ ಇಲಾಖೆಯು ಜವಾಬ್ದಾರಿಯಲ್ಲ. ಹಾಗೂ ಯಾವುದೇ ಪರಿಸ್ಥಿತಿಯಲ್ಲಿ ಹಣ ಹಿಂದಿರುಗಿಸಲಾಗುವುದಿಲ್ಲ.

11) ಫಸಲು ವೀಕ್ಷಿಸಲು ಇಷ್ಟವುಳ್ಳವರು ಕಛೇರಿಯ ವೇಳೆಯಲ್ಲಿ ಸಂಬಂಧಿಸಿದ ಕ್ಷೇತ್ರದ ಅಧಿಕಾರಿಗಳನ್ನು ಕಂಡು ಮಾಹಿತಿ ಪಡೆಯಬಹುದು.

12) ಟೆಂಡರ್‌ದಾರರು ಇಲಾಖೆಯ ಎಲ್ಲ ನಿಬಂಧನೆಗಳಿಗೆ ಬದ್ಧರಾಗಿರಬೇಕು. ಒಂದು ವೇಳೆ ಯಾವುದೇ ನಿಯಮ ಉಲ್ಲಂಘಿಸಿದರೆ ಠೇವಣಿ ಹಣ ಮತ್ತು ಶೇ.50ರ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

13) ಫಸಲಿಗೆ ಯೋಗ್ಯ ಬೆಲೆ ಬಾರದಿದ್ದಲ್ಲಿ ಕಟಾವಿಗೆ ಅನುಮತಿ ನೀಡುವುದು/ ತಿರಸ್ಕರಿಸುವುದು ಇಲಾಖೆಯ ಸಕ್ಷಮ ಪ್ರಾಧಿಕಾರಕ್ಕೆ ಸೇರಿರುತ್ತದೆ.

14) ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಚೆವುಳ್ಳವರು ಇಲಾಖಾ ಕಛೇರಿಗಳಿಗೆ ಭೇಟಿ ಮಾಡಿ ಸಂಪೂರ್ಣ ಮಾಹಿತಿ ಪಡೆದುಕೊಳ್ಳಬೇಕು.

15) ಹೆಚ್ಚಿನ ಮಾಹಿತಿಗಾಗಿ ಕಛೇರಿ ಅಧಿಕಾರಿಗಳನ್ನು ಬೇಟಿಯಾಗುವುದು.

ತೋಟಗಾರಿಕೆ ಉಪ ನಿರ್ದೇಶಕರು,
ಗಾಂಧಿ ಪಾರ್ಕ್, ಶಿವಮೊಗ್ಗ.

ಪಿ.ಆರ್.501

**OFFICE OF THE DIRECTOR ANIMAL HUSBANDARY & VETERINARY SERVICES, 5TH FLOOR, VISHVESHWARAYA MINI TOWER, DR. B.R. AMBEDKAR ROAD, BANGALORE-1**

**NOTIFICATION**

**No.DAH/Est-2/CR-115/2006-07, Dated:10th August, 2007**

In pursuance of this office Notification No. ಅಪಸಂ/ಸಿಬ್ಬಂದಿ–2/ವಿವ–115/2006-07 ದಿನಾಂಕ: 31.05.2007 and with Government permission vide letter No. AHF/55/ VAH /2005 dated. 22.02.2007, the provisional selection list of candidates selected for 276 posts of Veterinary Officers on the basis of merit and roaster is hereby published. The candidates likely to be affected by this list may file objections, if any, duly enclosing relevant documents addressed to the Joint director (Admn.) & Ex-officio Member Secretary, Departmental Selection Committee, Office of the Director, Department of Animal Husbandry & Veterinary Services 5th Floor, Sir. M. Vishveshwaraya Mini Tower, Dr. B.R. Ambedkar Road, Bangalore-560 001 within 15 days from the date of publication of the Notification. Objections will not be received /considered after the above said period.

**PROVISIONAL SELECT LIST FOR THE POST OF VETERINARY OFFICER (Prescribed qualification for the post of Veterinary Officer BVSc., & KVC valid Registration)**

| Sl No | Name of the Candidate | Address | Date of Birth | Reservation | %age of marks (BVSc. OGPA) |
|---|---|---|---|---|---|
| 1 | 2 | 3 | 4 | 5 | 6 |
| 1 | Rupashree A.R. | W/o. Rajesh B.R. C/o. N.P. Ranganatha Rao, No. 362, 1st Main Road, Yeshwanthpur, Bangalore-560 022 | 01/05/1975 | GM/GM | 88.20 |
| 2 | Malathi V | W/o. Lakshmiprasad Reddy, No.14, 3rd Cross, Vittal nagar, Chamaraja pete, Bangalore - 560 018 | 28/08/1973 | IIIA/GM | 88.10 |
| 3 | Vijayabhasker K.S. | S/o. Someshaiah K.P., Devanahalli Camp Office, BAMUL, PLD Bank Building, Devanahalli Bangalore Rural dist. 562 110 | 15/04/1975 | GM/GM | 86.80 |
| 4 | Santosh Hadimani | S/o. Girimallappa Hadimani, Adhyapak Nagar, Naragund, Gadag dist. 582 207 | 22/07/1982 | IIA/GM | 85.50 |
| 5 | Girish B.C. | S/o. B.V. Chandra shekaraiah, C/o. S. Prasanna, D.No.9/80, 1st Arakanatha Road, Near Srinivasa Work Shop, K.R. nagar, Mysore dist. | 23/06/1978 | GM/GM | 85.40 |
| 6 | Naveena A.N. | S/o. Nagaraju A.Y., Arasikere Police Quarters, No.2, Arasikere post, Pavagada Tq., Tumkur dist. 561 202 | 01/03/1984 | IIIA/GM | 85.10 |

| 1 | 2 | 3 | 4 | 5 | 6 |
|---|---|---|---|---|---|
| 7 | Ananda kumar B.S. | S/o. Sreerama Reddy, Banahalli, Kaivara post, Chintamani Tq., Kolar dist. 563 128 | 24/09/1980 | IIIA/GM | 84.40 |
| 8 | Shivanand Magadum | S/o. Siddanna, Sultanpur post, Hukkeri Tq., Belgaum dist. 591 309 | 15/05/1983 | IIIB/GM | 84.00 |
| 9 | Sebastian V.J. | S/o. Joseph V.J., Flat No. 13, Block 14, Kendriya Vihar, Miyapur, Hyderabad 560 049 | 13/08/1980 | GM/GM | 83.90 |
| 10 | Dhanalakshmi H | W/o. Shivakumar K., No.18, Raghavendra Nilaya, 2nd Main Road, Opp. GSVK School, Chamundeshwari layout, Doddabommasandra, Vidyaranyapura post, Bangalore 560 097 | 14/02/1975 | GM/GM | 83.60 |
| 11 | Arunakumar G.B. | S/o. Basavarajappa G., MVSc, Scholar, Division of Bio Technology, IVRI, Izatnagar, U.P. 243 122 | 10/05/1981 | GM/GM | 82.80 |
| 12 | Mahantesh M Patil | C/o. K.P. Venkatesh, No.550, AHIMSA MARGA, 2nd Cross, Siddartha nagar, Mysore 570 011 | 23/11/1978 | GM/GM | 82.40 |
| 13 | Sreenivasa Bharath M.S. | S/o. Sheshadri M.S. No. 132, Thittumale street, Melkote post, pandavapura Tq., Mandya dist. 571 431 | 05/09/1983 | GM/GM | 82.30 |
| 14 | Pavan kumar K.N. | S/o. Nagaraja K., Advocate & Notary, Court Circle, B.M. Road, Alur, Hassan 573 213 | 18/03/1984 | GM/GM | 82.20 |
| 15 | Shankaramurthy N.C. | S/o.Channabasappa, Neralakere, Tarikere Tq., Chickmagalur dist. 577 228 | 12/07/1981 | IIIB/GM | 82.10 |
| 16 | Thippeswamy H.S. | S/o. Sannasiddappa H.M. Hirenalluru, Kadur Tq., Chickmagalur dist. 577 562 | 01/06/1981 | GM/GM | 82.00 |
| 17 | Lathamani V.S. | D/o. Shekharaiah C/o. T. Basavanna, Tarabenahalli, J.C. Pura post, Chikkanayakanahalli Tq., Tumkur dist 572 214 | 04/07/1981 | IIIB/GM | 81.70 |

